CPMG / KA / BG-GPO/13/2003-2005 ಸುವರ್ಣ ಕರ್ನಾಟಕ 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೩೦, ೨೦೦೫ (ಆಷಾಢ ೯, ಶಕ ವರ್ಷ ೧೯೨೭) | ಸಂಚಿಕೆ ೨೬ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಶಿಕ್ಷಣ ಸಚಿವಾಲಯ

**ವಿಷಯ:** ಡಿಪ್ಲೊಮೊ ಪ್ರವೇಶಕ್ಕೆ ಕನಿಷ್ಠ ವಿದ್ಯಾರ್ಹತೆಯಲ್ಲಿನ ಅಂಕಗಳನ್ನು ಪರಿಷ್ಕರಿಸಿ ಮಾರ್ಪಾಡು ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಇಡಿ 346 ಟಿಪಿಇ 2003, ದಿನಾಂಕ: 30.12.2003.

2) ತಾಂತ್ರಿಕ ಶಿಕ್ಷಣ ನಿರ್ದೇಶಕರ ಪತ್ರ ಸಂಖ್ಯೆ: ಡಿಟಿಇ 153 ಎಸಿಎಂ (2) 2004:3978, ದಿನಾಂಕ: 3.3.2005.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ತಾಂತ್ರಿಕ ಶಿಕ್ಷಣ ಗುಣಮಟ್ಟದ ಹಿತದೃಷ್ಟಿಯಿಂದ ಪ್ರಥಮ ವರ್ಷದ ಡಿಪ್ಲೊಮೊ ಪ್ರವೇಶಕ್ಕೆ 2004-05ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸರ್ಕಾರದ ಆದೇಶ ಸಂಖ್ಯೆ: ಇಡಿ 98 ಟಿಪಿಇ 2003 ದಿನಾಂಕ: 30.05.2003ನ್ನು ಭಾಗಶಃ ಮಾರ್ಪಡಿಸಿ ವಿದ್ಯಾರ್ಹತೆಯನ್ನು ನಿಗದಿಪಡಿಸಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ದಿನಾಂಕ: 03.03.2005ರ ಪತ್ರದಲ್ಲಿ ತಾಂತ್ರಿಕ ಶಿಕ್ಷಣ ಇಲಾಖೆಯ ನಿರ್ದೇಶಕರು ಸರ್ಕಾರದ ಆದೇಶ ಸಂಖ್ಯೆ: ಇಡಿ 346 ಟಿಪಿಇ 2003, ದಿನಾಂಕ: 30.12.2003ರ ಆದೇಶದಲ್ಲಿ ಡಿಪ್ಲೊಮೊ (ಇಂಜಿನಿಯರಿಂಗ್) ಕೋರ್ಸುಗಳಿಗೆ ಈ ಕೆಳಕಂಡ ಕನಿಷ್ಠ ವಿದ್ಯಾರ್ಹತೆಯನ್ನು ಪಡೆದಿರಬೇಕಾಗಿರುತ್ತದೆ ಎಂದು ತಿಳಿಸಿರುತ್ತಾರೆ.

| | ಡಿಪ್ಲೊಮೊ ಇಂಜಿನಿಯರಿಂಗ್ ಕೋರ್ಸು | ಡಿಪ್ಲೊಮೊ ಇನ್ ಸಿನಿಮಾಟೋಗ್ರಫಿ ಮತ್ತು ಸೌಂಡ್ ರೆಕಾರ್ಡಿಂಗ್ ಇಂಜಿನಿಯರಿಂಗ್ ಕೋರ್ಸು |
|---|---|---|
| ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುತ್ತದೆ. | ಕರ್ನಾಟಕ ಅಥವಾ ಇತರೇ ರಾಜ್ಯದ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) | ಕರ್ನಾಟಕ ಅಥವಾ ಇತರೇ ರಾಜ್ಯದ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಪಿ.ಸಿ.ಎಂ. ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು. (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) |

ಮೇಲಿನಂತೆ ವಿದ್ಯಾರ್ಹತೆ ಮೇರೆಗೆ ಡಿಪ್ಲೊಮೊ ಪ್ರವೇಶ ಮಾಡುತ್ತಿದ್ದು, ಆ ಪೈಕಿ ಖಾಸಗಿ ಪಾಲಿಟೆಕ್ನಿಕ್‌ಗಳು ಹಾಗೂ ಅನುದಾನಿತ ಪಾಲಿಟೆಕ್ನಿಕ್‌ಗಳಲ್ಲಿ ಕರ್ನಾಟಕ ಅಭ್ಯರ್ಥಿಗಳಲ್ಲದೆ ಹೊರ ರಾಜ್ಯದ ಅಭ್ಯರ್ಥಿಗಳಿಗೆ ಪ್ರವೇಶ ನೀಡುವ ಮುಂಚೆ ತಾಂತ್ರಿಕ ಪರೀಕ್ಷಾ ಮಂಡಳಿಯಿಂದ ಅರ್ಹತಾ ಪ್ರಮಾಣ ಪತ್ರವನ್ನು ಪಡೆಯಬೇಕಾಗಿರುತ್ತದೆ.

ಅರ್ಹತಾ ಪ್ರಮಾಣ ಪತ್ರವನ್ನು ಪಡೆಯುವ ಸಮಯದಲ್ಲಿ ಅಭ್ಯರ್ಥಿಯು ಮೂಲ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವ ಬಗ್ಗೆ ಪ್ರಮಾಣ ಪತ್ರ ಸಲ್ಲಿಸಬೇಕಾಗಿದ್ದು, ಈ ಸಂಬಂಧದಲ್ಲಿ ಸಲ್ಲಿಸಲಾದ ಹಲವು ರಾಜ್ಯಗಳ ಪರೀಕ್ಷಾ ಮಂಡಳಿಯ ಅಂಕಪಟ್ಟಿಗಳನ್ನು ಪರಿಶೀಲನೆ ಮಾಡಿದಾಗ ಕೆಳಕಂಡ ಅಂಶಗಳು ಗಮನಕ್ಕೆ ಬಂದಿರುತ್ತದೆ.

(1) ಡೇವಿಸ್ ಸಂಕಲ್ಪ್ ಕೆ. ಈ ಅಭ್ಯರ್ಥಿಯು ಐ.ಸಿ.ಎಸ್.ಇ ಪರೀಕ್ಷೆಯಲ್ಲಿ ಒಟ್ಟಾರೆ ಉತ್ತೀರ್ಣನಾಗಿದ್ದು ಗಣಿತ ವಿಷಯದಲ್ಲಿ 30 ಅಂಕಗಳನ್ನು ಪಡೆದಿರುತ್ತಾರೆ. ಆದರೆ, ಐ.ಸಿ.ಎಸ್.ಇ. ಪರೀಕ್ಷೆಯ ಪ್ರತಿ ವಿಷಯದ ಉತ್ತೀರ್ಣತೆಗೆ ಶೇ.35 ಅಂಕಗಳನ್ನು ಗಳಿಸಿರಬೇಕು.

(2) ರಾಜಗೋಪಾಲರೆಡ್ಡಿ ಈ ಅಭ್ಯರ್ಥಿಯು ಆಂಧ್ರಪ್ರದೇಶದ ಎಸ್.ಎಸ್.ಎಲ್.ಸಿ. ಯಲ್ಲಿ ಒಟ್ಟಾರೆ ಉತ್ತೀರ್ಣನಾಗಿದ್ದು ಗಣಿತ ವಿಷಯದಲ್ಲಿ 25 ಅಂಕಗಳನ್ನು ಪಡೆದಿರುತ್ತಾರೆ. ಅಂಕಪಟ್ಟಿಯಲ್ಲಿ ಈ ವಿಷಯದ ಎದುರು ಎಫ್ ಎಂದು ನಮೂದಿಸಲಾಗಿರುತ್ತದೆ.

ಪ್ರಸ್ತುತ ಡಿಪ್ಲೊಮೊಗೆ ನಿಗದಿಪಡಿಸಿರುವ ವಿದ್ಯಾರ್ಹತೆಯಲ್ಲಿ ಕನಿಷ್ಟ ಇಂತಿಷ್ಟೇ ಶೇಕಡ ಅಂಕಗಳನ್ನು ಪಡೆದಿರಬೇಕೆಂದು ನಿಗದಿಪಡಿಸದೇ ಇರುವುದರಿಂದ ಅರ್ಹತಾ ಪ್ರಮಾಣ ಪತ್ರ ವಿತರಿಸುವ ಸಮಯದಲ್ಲಿ ಸಮಸ್ಯೆ ಹಾಗೂ ಗೊಂದಲ ಉಂಟಾಗಿರುವ ಅನೇಕ ಪ್ರಕರಣಗಳು ಉದ್ಭವವಾಗಿರುತ್ತದೆ.

ಆದ್ದರಿಂದ ಡಿಪ್ಲೊಮೊ ಪ್ರವೇಶಾರ್ಹತೆಯಲ್ಲಿ ಒಂದು ಕನಿಷ್ಟ ಮಟ್ಟವನ್ನು ಕಾಯ್ದಿರಿಸುವ ನಿಟ್ಟಿನಲ್ಲಿ ಹಾಗೂ ಅರ್ಹತಾ ಪ್ರಮಾಣ ಪತ್ರವನ್ನು ವಿತರಿಸುವ ಸಮಯದಲ್ಲಿ ಉಂಟಾಗುತ್ತಿರುವ ಸಮಸ್ಯೆಗಳನ್ನು ನಿವಾರಿಸುವ ದೃಷ್ಟಿಯಿಂದ ಪ್ರಸ್ತುತ ಜಾರಿಯಲ್ಲಿರುವ ಪ್ರವೇಶಾರ್ಹತೆಯಲ್ಲಿನ ಅಂಕಗಳಲ್ಲಿ ಕೆಳಕಂಡಂತೆ ಪರಿಷ್ಕರಣೆ ಮಾಡುವುದು ಸೂಕ್ತವಾಗಿರುತ್ತದೆ.

| ಕೋರ್ಸು | ಪ್ರಸ್ತುತದಲ್ಲಿರುವ ವಿದ್ಯಾರ್ಹತೆ ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ | ಪರಿಷ್ಕರಿಸಬಹುದಾದ ವಿದ್ಯಾರ್ಹತೆ ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ |
|---|---|---|
| ಡಿಪ್ಲೊಮೊ ಇಂಜಿನಿಯರಿಂಗ್ ಕೋರ್ಸು | ಕರ್ನಾಟಕ ಅಥವಾ ಇತರೇ ರಾಜ್ಯದ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) | ಕರ್ನಾಟಕ ಅಥವಾ ಇತರೇ ರಾಜ್ಯದ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಲ್ಲದೆ ಕೆಳಕಂಡ ಪ್ರತಿ ವಿಷಯಗಳಲ್ಲೂ ಸಹ ಕನಿಷ್ಟ 35 ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು 1) ಗಣಿತ 2) ವಿಜ್ಞಾನ |
| ಡಿಪ್ಲೊಮೊ ಇನ್ ಸಿನಿಮಾಟೋಗ್ರಫಿ ಹಾಗೂ ಸೌಂಡ್ ರೆಕಾರ್ಡಿಂಗ್ ಇಂಜಿನಿಯರಿಂಗ್ | ಕರ್ನಾಟಕ ಅಥವಾ ಇತರೇ ರಾಜ್ಯದ ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಪಿ.ಸಿ.ಎಂ. ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) | ಕರ್ನಾಟಕ ಅಥವಾ ಇತರೇ ರಾಜ್ಯದ ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಲ್ಲದೆ ಕೆಳಕಂಡ ಪ್ರತಿ ವಿಷಯಗಳಲ್ಲೂ ಸಹ ಕನಿಷ್ಟ 35 ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು 1) ಭೌತಶಾಸ್ತ್ರ 2) ರಸಾಯನಶಾಸ್ತ್ರ 3) ಗಣಿತ |

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿ ಡಿಪ್ಲೊಮೊ ಪ್ರವೇಶಕ್ಕೆ ನಿಗದಿಪಡಿಸಿರುವ ಕನಿಷ್ಟ ವಿದ್ಯಾರ್ಹತೆಯಲ್ಲಿನ ಅಂಕಗಳನ್ನು ಪರಿಷ್ಕರಿಸುವ ಬಗ್ಗೆ ಶಿಫಾರಸ್ಸು ಮಾಡಿರುವುದನ್ನು ಗಣನೆಗೆ ತೆಗೆದುಕೊಂಡು 2005-06ನೇ ಸಾಲಿನ ಶೈಕ್ಷಣಿಕ ವರ್ಷದಿಂದಲೇ ಜಾರಿಗೆ ಬರುವಂತೆ ಸರ್ಕಾರದ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 106 ಟಿಪಿಇ 2005, ಬೆಂಗಳೂರು, ದಿನಾಂಕ: 16ನೇ ಮೇ 2005**

ನಿರ್ದೇಶಕರು, ತಾಂತ್ರಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ಸರ್ಕಾರವು ಡಿಪ್ಲೊಮೊ ಪ್ರವೇಶಾರ್ಹತೆಯಲ್ಲಿ ಒಂದು ಕನಿಷ್ಟ ಮಟ್ಟವನ್ನು ಕಾಯ್ದಿರಿಸುವ ನಿಟ್ಟಿನಲ್ಲಿ ಹಾಗೂ ಅರ್ಹತಾ ಪ್ರಮಾಣ ಪತ್ರವನ್ನು ವಿತರಿಸುವ ಸಮಯದಲ್ಲಿ ಉಂಟಾಗುತ್ತಿರುವ ಸಮಸ್ಯೆಗಳನ್ನು ನಿವಾರಿಸುವ ದೃಷ್ಟಿಯಿಂದ ಪ್ರಸ್ತುತ ಜಾರಿಯಲ್ಲಿರುವ ಪ್ರವೇಶಾರ್ಹತೆಯಲ್ಲಿನ ಅಂಕಗಳನ್ನು ಈ ಕೆಳಕಂಡಂತೆ ಪರಿಷ್ಕರಣೆ ಮಾಡಿ 2005-06ನೇ ಸಾಲಿನ ಶೈಕ್ಷಣಿಕ ವರ್ಷದಿಂದಲೇ ಜಾರಿಗೆ ಬರುವಂತೆ ಸರ್ಕಾರವು ಆದೇಶಿಸಿದೆ.

| ಕೋರ್ಸು | ಪ್ರಸ್ತುತ ಜಾರಿಯಲ್ಲಿರುವ ವಿದ್ಯಾರ್ಹತೆ | ಮಾರ್ಪಾಡು ಮಾಡಿರುವ ವಿದ್ಯಾರ್ಹತೆ ಮತ್ತು ಅಂಕಗಳು |
|---|---|---|
| ಡಿಪ್ಲೊಮೊ ಇಂಜಿನಿಯರಿಂಗ್ ಕೋರ್ಸು | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ** ಕರ್ನಾಟಕ ಅಥವಾ ಇತರೇ ರಾಜ್ಯದ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಗಣಿತ ಮತ್ತು ವಿಜ್ಞಾನ ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ** ಕರ್ನಾಟಕ ಅಥವಾ ಇತರೇ ರಾಜ್ಯದ ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಲ್ಲದೆ, ಕೆಳಕಂಡ ಪ್ರತಿ ವಿಷಯಗಳಲ್ಲೂ ಸಹ ಕನಿಷ್ಟ 35 ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು 1) ಗಣಿತ 2) ವಿಜ್ಞಾನ |
| ಡಿಪ್ಲೊಮೊ ಸಿನಿಮಾಟೋಗ್ರಫಿ ಹಾಗೂ ಸೌಂಡ್ ರೆಕಾರ್ಡಿಂಗ್ ಇಂಜಿನಿಯರಿಂಗ್ | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ** ಕರ್ನಾಟಕ ಅಥವಾ ಇತರೇ ರಾಜ್ಯದ ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣ ಜೊತೆಗೆ ಪಿ.ಸಿ.ಎಂ. ವಿಷಯಗಳನ್ನು ವ್ಯಾಸಂಗ ಮಾಡಿ ಉತ್ತೀರ್ಣರಾಗಿರಬೇಕು (ಗ್ರೇಸ್ ಅಂಕಗಳೊಂದಿಗೆ ಉತ್ತೀರ್ಣರಾಗಿರುವುದನ್ನು ಹೊರತುಪಡಿಸಿ) | **ಎಲ್ಲಾ ವರ್ಗದ ಅಭ್ಯರ್ಥಿಗಳಿಗೆ ಅನ್ವಯವಾಗುವಂತೆ** ಕರ್ನಾಟಕ ಅಥವಾ ಇತರೇ ರಾಜ್ಯದ ದ್ವಿತೀಯ ಪಿ.ಯು.ಸಿ. ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರುವುದಲ್ಲದೆ ಕೆಳಕಂಡ ಪ್ರತಿ ವಿಷಯಗಳಲ್ಲೂ ಸಹ ಕನಿಷ್ಟ 35 ಅಂಕಗಳನ್ನು ಪಡೆದು ಉತ್ತೀರ್ಣರಾಗಿರಬೇಕು 1) ಭೌತಶಾಸ್ತ್ರ 2) ರಸಾಯನಶಾಸ್ತ್ರ 3) ಗಣಿತ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ವೇಣುಗೋಪಾಲ್**

ಪಿ.ಆರ್. 710 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** 2005-06ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆಯ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್ 4 ಎಸ್‌ಟಿಆರ್ 2001, ದಿನಾಂಕ: 22.11.2001.

2) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 11 ಸೇನೌವ 2005, ದಿನಾಂಕ: 2.5.2005.

**ಪ್ರಸ್ತಾವನೆ:**

2005-06ನೇ ಸಾಲಿನಲ್ಲಿ ಮೇಲೆ ಓದಲಾದ ದಿನಾಂಕ: 22.11.2001ರ ಸರ್ಕಾರದ ಆದೇಶದಲ್ಲಿನ ಮಾರ್ಗಸೂಚಿಗಳಿಗೆ ಒಳಪಟ್ಟು ಸರ್ಕಾರಿ ನೌಕರರ ವರ್ಗಾವಣೆಗಳನ್ನು ದಿನಾಂಕ: 15.5.2005 ರವರೆಗೆ ಮಾಡಬಹುದೆಂದು ಆದೇಶಿಸಲಾಗಿತ್ತು. ಇದನ್ನು ಪುನರ್ ಪರಿಶೀಲಿಸಿ ವರ್ಗಾವಣೆಯ ಅವಧಿಯನ್ನು ಇನ್ನೂ 10 ದಿನಗಳ ಕಾಲ ವಿಸ್ತರಿಸುವುದು ಅವಶ್ಯವೆಂದು ಸರ್ಕಾರವು ಪರಿಗಣಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 16 ಸೇನೌವ 2005, ಬೆಂಗಳೂರು, ದಿನಾಂಕ: 20ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಮೇಲೆ ಓದಲಾದ ದಿನಾಂಕ: 2.5.2005ರ ಸರ್ಕಾರದ ಆದೇಶವನ್ನು ಮಾರ್ಪಡಿಸಿ, ದಿನಾಂಕ: 22.11.2001ರ ಸರ್ಕಾರಿ ಆದೇಶದಲ್ಲಿನ ಮಾರ್ಗಸೂಚಿಗಳು ಮತ್ತು ಷರತ್ತುಗಳಿಗೊಳಪಟ್ಟು 2005-06ನೇ ಸಾಲಿನಲ್ಲಿ ಸರ್ಕಾರಿ ನೌಕರರ ವರ್ಗಾವಣೆಗಳನ್ನು ದಿನಾಂಕ: 24.5.2005ರ ವರೆಗೆ ಮಾತ್ರ ಮಾಡಬಹುದೆಂದು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಕೆ. ಬಾಬುರಾವ್**

ಪಿ.ಆರ್. 711

ಸರ್ಕಾರದ ಅಧೀನ ಕಾರ್ಯದರ್ಶಿ-1,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು).

## WATER RESOURCES SECRETARIAT

**Subject:** Re-constitution of State Level Technical Co-ordination Committee (TCC) in respect of schemes pertaining to Artificial Recharge to Ground Water in the State.

**Read:**
1. Letter No. T-8-/CGWB/SWR/2002, dated: 16.12.2002 from The Regional Director, Central Ground Water Board, South Western Region, Bangalore.
2. Govt. Order No. SANEEYI 19 GWD 2003, dated: 29.05.2003.

**PREAMBLE:**

The Regional Director, Government of India, Ministry of Water Resources, Central Gound Water Board, South Western Region, Bangalore in the letter read at (1) above, addressed to the Government of Water Resources Department (Minor Irrigation) has sent a copy of the guidelines received from the Central Head Quarters for the Central Sector Schemes on Ground Water Recharge for effective sustainable availability of Ground Water in the Country under 10th Plan and stated that the Central Ground Water Board is offering financial assistance for schemes pertaining to Artificial Recharge to Ground Water in the State. It has been stipulated that these schemes have to be approved initially at district level T.C.C. and subsequently by the State level T.C.C. before the schemes are submitted to Central for approval and sanction of funds. Hence, he has requested the State Govt. for Constitution of State level TCC under Chairmanship of the Principal Secretary in charge of Ground Water. Accordingly, the Govt. vide (2) above issued the order constituting the State Level Technical Co-ordination Committee as here under.

| | | |
|---|---|---|
| 1 | Principal Secretary to Government<br>Water Resources Department (Minor Irrigation) | Chairman |
| 2 | Regional Director, CGWB, SWR | Member |
| 3 | Director, Mines & Geology Department | Member |
| 4 | Head, Implementing Agency | Member |
| 5 | Chief Engineer, Minor Irrigation (S) Bangalore | Member |
| 6 | Additional Director, Dept. of Mines & Geology (Ground Water Wing) | Member |
| 7 | Nodal Officer In charge, Artificial Recharge CGWB, SWR, Bangalore. | Member Secretary |

Now the Government has decided to re-constitute the State level Technical Co-ordination Committee. Hence, this order.

**GOVERNMENT ORDER No. SANEEYI 19 GWD 2003, Bangalore, Dated: 16th May 2005**

Under the Circumstances explained in the preamble, Government is pleased to reconstitute the State Level Technical Co-ordination Committee as follows:

| | | |
|---|---|---|
| 1 | Secretary to Government<br>Water Resources Department (Minor Irrigation) | Chairman |
| 2 | Secretary to Government, RDPR | Member |
| 3 | Additional Secretary, Planning Department | Member |
| 4 | Commissioner for Watershed Development,<br>Agriculture & Horticulture Department | Member |
| 5 | Commissioner for Mines & Geological<br>Resources Development and Director, Mines & Geology Department | Member |
| 6 | Director, Rural Infrastructure Water Supply, RDPR | Member |
| 7 | Chief Engineer, Minor Irrigation (S), Bangalore | Member |
| 8 | Chief Engineer, Minor Irrigation (N), Bijapur | Member |
| 9 | Additional Director, Mines & Geology Department (Water Wing) | Member |
| 10 | Regional Director, Central Ground Water Board | Member Secretary |

By Order and in the Name of the Governor of Karnataka,

**M.N. MANJUNATHA**

P.R. 703

Under Secretary to Government,

Water Resources Department (Minor Irrigation).

## ಇಂಧನ ಸಚಿವಾಲಯ

**ವಿಷಯ:** ಮೆ: ಜೇಬಾ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ 1 (ಒಂದು) ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಗೋಪಾಲಪುರ/2004/427, ದಿನಾಂಕ: 04.03.2005.

2. ದಿನಾಂಕ: 05.03.2005 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಓದಲಾದ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಜೇಬಾ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಗೋಪಾಲಪುರ ಗ್ರಾಮದ ಬಳಿ, ನಾರಾಯಣಪುರ ಅಣೆಕಟ್ಟೆನಿಂದ ಕೆಳ ತೊರೆಯಲ್ಲಿ 1(ಒಂದು) ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಮೆ: ಜೇಬಾ ಪವರ್ ಪ್ರೈವೇಟ್ ಲಿಮಿಟೆಡ್ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ ತಾಂತ್ರಿಕ ವರದಿಯೊಂದಿಗೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು (2) ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ.

ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಂಇ 58 ಎನ್‌ಸಿಇ 2005, ಬೆಂಗಳೂರು, ದಿನಾಂಕ: 25ನೇ ಏಪ್ರಿಲ್ 2005**

ಸರ್ಕಾರವು ಮೆ: ಜೇಬಾ ಪವರ್ ಪ್ರೈವೇಟ್ ಲಿಮಿಟೆಡ್, ಈ ಕಂಪೆನಿಗೆ ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಗೋಪಾಲಪುರ ಗ್ರಾಮದ ಬಳಿ, ನಾರಾಯಣಪುರ ಅಣೆಕಟ್ಟೆನಿಂದ ಕೆಳ ತೊರೆಯಲ್ಲಿ 1 (ಒಂದು) ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲ್ತೊರೆಯಲ್ಲಿರುವ ಮೆ: ಪುಸಾಲ ಪವರ್ ಕಂಪನಿಯವರ 2 ಮೆಗಾವ್ಯಾಟ್‌ನ (ಲಿಂಗದಹಳ್ಳಿ) ಯೋಜನೆಗೆ ಅಡ್ಡಿಯಾಗಕೂಡದು ಹಾಗೂ ಡಿ.ಪಿ.ಆರ್. ಮಾಡಿಸಿದ ಮೇಲೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಈ ಬಗ್ಗೆ ಸೂಕ್ತ ರಕ್ಷಣೆ ಮಾಡಬೇಕೆಂಬ ಷರತ್ತಿನೊಂದಿಗೆ ಹಾಗೂ ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ:-

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

   (ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

   (ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ರೂ.25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

   (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗಮಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್ ಬಿ. ಕೃಷ್ಣಪ್ಪನವರ್**

ಪಿ.ಆರ್. 713 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** 2005-06ನೇ ಸಾಲಿಗೆ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಸೇವಾನಿರತ ದಂತ ಆರೋಗ್ಯಾಧಿಕಾರಿಗಳನ್ನು ನಿಯೋಜನೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 401 ಹೆಚ್‌ಎಸ್‌ಹೆಚ್ 2005, ದಿನಾಂಕ: 06.05.2005.

2) ನಿಬಂಧಕರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರ ಪ್ರಸ್ತಾವನೆ ಸಂಖ್ಯೆ: ಪಿಜಿಇಟಿ 6:ಸಿಒಯುಎನ್:01/2005-06, ದಿನಾಂಕ: 7.5.2005.

**ಪ್ರಸ್ತಾವನೆ:**

ಕರ್ನಾಟಕ ವೈದ್ಯಕೀಯ ಕಾಲೇಜುಗಳು ಮತ್ತು ದಂತ ಕಾಲೇಜುಗಳು (ಸ್ನಾತಕೋತ್ತರ ಕೋರ್ಸುಗಳಿಗೆ ಆಯ್ಕೆ) ನಿಯಮ 1987ರ ಪ್ರಕಾರ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಮತ್ತು ಸ್ವಾಯತ್ತ ಸಂಸ್ಥೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸೇವಾನಿರತ ದಂತ ಆರೋಗ್ಯಾಧಿಕಾರಿಗಳು 2005-06ನೇ ಸಾಲಿನ ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಅರ್ಜಿಯನ್ನು ಸಲ್ಲಿಸಿ, ಕುಲಸಚಿವರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರ ಆಯ್ಕೆ ಪಟ್ಟಿಯಂತೆ ಸರ್ಕಾರವು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಕೃತ ಜ್ಞಾಪನದ ಅನುಬಂಧದಲ್ಲಿನ ಕ್ರಮ ಸಂಖ್ಯೆ: 11ರ ವರೆಗೆ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ದಂತ ಆರೋಗ್ಯಾಧಿಕಾರಿಗಳನ್ನು ಸ್ನಾತಕೋತ್ತರ ವ್ಯಾಸಂಗಕ್ಕಾಗಿ ಆಯ್ಕೆ ಮಾಡಲಾಗಿತ್ತು.

ಮೇಲೆ (2) ರಲ್ಲಿ ಓದಲಾದ ನಿಬಂಧಕರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರು ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿ, ಸರ್ಕಾರವು ಹೊರಡಿಸಲಾದ ಅಧಿಕೃತ ಜ್ಞಾಪನ ದಿನಾಂಕ: 6.5.2005 ರಲ್ಲಿನ ಕ್ರಮ ಸಂಖ್ಯೆ: 11 ರಲ್ಲಿನ ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ: 18 ರಲ್ಲಿರುವ ಡಾ: ಅನುಪಮ ಎನ್. ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಜಗಳೂರು, ದಾವಣಗೆರೆ ಜಿಲ್ಲೆ ಇವರು ಎಂಡಿಎಸ್ (ಪ್ರಾಸ್ಥೋಡಾಂಟಿಕ್ಸ್) ವಿಷಯದಲ್ಲಿ ಒಕ್ಕಲಿಗರ ಸಂಘ ದಂತ ಕಾಲೇಜು, ಬೆಂಗಳೂರು ಇಲ್ಲಿ ಸಾಮಾನ್ಯ ವರ್ಗದಲ್ಲಿ ಆಯ್ಕೆಯಾಗಿದ್ದು, ಸದರಿಯವರಿಗಿಂತ ಹೆಚ್ಚಿನ ರ್‍ಯಾಂಕ್ ಪಡೆದಿರುವ ಆಯ್ಕೆ ಪಟ್ಟಿಯಲ್ಲಿಯ ಕ್ರಮ ಸಂಖ್ಯೆ: 8ರ ಡಾ: ಸವಿತಾ ಬಿ. ನಾಯ್ಕ್, ಸಾರ್ವಜನಿಕ ಆಸ್ಪತ್ರೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರು ಎಂಡಿಎಸ್ (ಕನ್ಸರ್‌ವೇಟಿವ್ ಡೆಂಟಿಸ್ಟ್ರಿ) ವಿಷಯದಲ್ಲಿ ಬೆಂಗಳೂರು ಇನ್‌ಸ್ಟಿಟ್ಯೂಟ್ ಆಫ್ ಡೆಂಟಲ್ ಸೈನ್ಸ್ ಮತ್ತು ಆಸ್ಪತ್ರೆ, ಬೆಂಗಳೂರು ಇಲ್ಲಿಗೆ ಸಾಮಾನ್ಯ ವರ್ಗದಲ್ಲಿ ಆಯ್ಕೆಗೊಂಡಿರುವರೆಂದೂ ಇವರ ಹೆಸರು ತಪ್ಪಾಗಿ ಬಿಟ್ಟು ಹೋಗಿರುವುದಾಗಿ ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಸರ್ಕಾರವು ನಿಬಂಧಕರು, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಡಾ: ಅನುಪಮ ಎನ್. ಇವರ ಹೆಸರನ್ನು ಕೈಬಿಟ್ಟು ಡಾ: ಸವಿತಾ ಬಿ. ನಾಯ್ಕ್ ಇವರ ಹೆಸರನ್ನು ಸೇರಿಸಲು ನಿರ್ಧರಿಸಿ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 401 ಹೆಚ್‌ಎಸ್‌ಹೆಚ್ 2005, ಬೆಂಗಳೂರು, ದಿನಾಂಕ: 17ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 401 ಹೆಚ್‌ಎಸ್‌ಹೆಚ್ 2005, ದಿನಾಂಕ: 6.5.2005 ರಲ್ಲಿನ ಕ್ರಮ ಸಂಖ್ಯೆ: 11 ರಲ್ಲಿನ ಆಯ್ಕೆ ಪಟ್ಟಿಯ ಕ್ರಮ ಸಂಖ್ಯೆ: 18 ರಲ್ಲಿರುವ ಡಾ: ಅನುಪಮ ಎನ್. ದಂತ ಆರೋಗ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಜಗಳೂರು, ದಾವಣಗೆರೆ ಜಿಲ್ಲೆ ಇವರ ನಿಯೋಜನೆಯನ್ನು ರದ್ದುಪಡಿಸಿದೆ. ಆಯ್ಕೆ ಪಟ್ಟಿಯಲ್ಲಿಯ ಕ್ರಮ ಸಂಖ್ಯೆ: 8ರ ಡಾ: ಸವಿತಾ ಬಿ. ನಾಯ್ಕ್, ಸಾರ್ವಜನಿಕ ಆಸ್ಪತ್ರೆ, ಭಟ್ಕಳ, ಉತ್ತರ ಕನ್ನಡ ಜಿಲ್ಲೆ ಇವರು ಎಂಡಿಎಸ್ (ಕನ್ಸರ್‌ವೇಟಿವ್ ಡೆಂಟಿಸ್ಟ್ರಿ) ವಿಷಯದಲ್ಲಿ ಬೆಂಗಳೂರು ಇನ್‌ಸ್ಟಿಟ್ಯೂಟ್ ಆಫ್ ಡೆಂಟಲ್ ಸೈನ್ಸ್ ಮತ್ತು ಆಸ್ಪತ್ರೆ, ಬೆಂಗಳೂರು ಇಲ್ಲಿಗೆ ಸಾಮಾನ್ಯ ವರ್ಗದಲ್ಲಿ ಆಯ್ಕೆಗೊಂಡಿರುವುದರಿಂದ ಇವರನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಿದೆ. ಸದರಿ ವೈದ್ಯರು ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಆಕುಕ 401 ಹೆಚ್‌ಎಸ್‌ಹೆಚ್ 2005 ದಿನಾಂಕ: 6.5.2005 ರಲ್ಲಿನ ನಿಬಂಧನೆಗಳಿಗೆ ಒಳಪಟ್ಟಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ.ಎಸ್. ಜಗದೀಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 714

**ಕಾನೂನು ಸಚಿವಾಲಯ**

**ವಿಷಯ:** ದಾವಣಗೆರೆ ಜಿಲ್ಲೆಯ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 118 ಎಲ್‌ಎಸಿ 2003, ದಿನಾಂಕ: 16.6.2003.
2. ಸರ್ಕಾರಿ ಆದೇಶ ಸಂಖ್ಯೆ:ಲಾ 108 ಎಲ್‌ಎಸಿ 2003, ದಿನಾಂಕ: 11.6.2003.
3. ಕರ್ನಾಟಕ ಉಚ್ಚ ನ್ಯಾಯಾಲಯದ ರಿಜಿಸ್ಟ್ರಾರ್ ಜನರಲ್‌ರವರ ಪತ್ರ ಸಂಖ್ಯೆ ಜಿಒಬಿ-2-102(6) ಮತ್ತು (12) 2005 ದಿನಾಂಕ 18.4.2005.

**ಪ್ರಸ್ತಾವನೆ:**

ದಾವಣಗೆರೆ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸಲು ಕ್ರಮವಾಗಿ ಮೇಲೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶದಲ್ಲಿ ಮಂಜೂರಾತಿಯನ್ನು ನೀಡಲಾಗಿದ್ದು ಈ ನ್ಯಾಯಾಲಯಗಳ ಕಾರ್ಯಾವಧಿಯು ದಿನಾಂಕ 24.6.2005ಕ್ಕೆ ಪೂರ್ಣಗೊಳ್ಳಲಿದೆ.

1. ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಹರಿಹರ.
2. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ಚನ್ನಗಿರಿ.

ಮೇಲ್ಕಂಡ ನ್ಯಾಯಾಲಯಗಳಿಗೆ ಮಂಜೂರಾದ ಪ್ರಿಸ್ಪೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ 25.6.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 121 ಎಲ್‌ಎಸಿ 2005, ಬೆಂಗಳೂರು, ದಿನಾಂಕ: 10ನೇ ಮೇ 2005**

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ದಾವಣಗೆರೆ ಜಿಲ್ಲೆಯ ಈ ಕೆಳಕಂಡ ನ್ಯಾಯಾಲಯಗಳ ಪ್ರಿಸ್ಪೈಡಿಂಗ್ ಅಧಿಕಾರಿ ಮತ್ತು ಅವುಗಳಿಗೆ ಹೊಂದಿಕೊಂಡ ಸಿಬ್ಬಂದಿ ಹುದ್ದೆಗಳ ಕಾರ್ಯಾವಧಿಯನ್ನು ದಿನಾಂಕ: 25.6.2005 ರಿಂದ ಎರಡು ವರ್ಷಗಳ ಅವಧಿಗೆ ಮುಂದುವರೆಸಿದೆ.

1. ಸಿವಿಲ್ ನ್ಯಾಯಾಧೀಶರು (ಹಿರಿಯ ವಿಭಾಗ) ಹರಿಹರ.
2. ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ಚನ್ನಗಿರಿ.

ಈ ನ್ಯಾಯಾಲಯಗಳ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2014-00-105-0-01-ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.96 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕಹನುಮಂತಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾನೂನು ಇಲಾಖೆ, (ಆಡಳಿತ-1)

ಪಿ.ಆರ್. 752

**ವಿಷಯ:** ಶ್ರೀ ವೈ. ಲಕ್ಷ್ಮೀಪತಿರೆಡ್ಡಿ, ವಕೀಲರು, ಬಾಗೇಪಲ್ಲಿ, ಕೋಲಾರ ಜಿಲ್ಲೆ, ಇವರನ್ನು ಬಾಗೇಪಲ್ಲಿ ಕಂದಾಯ ತಾಲ್ಲೂಕಿಗೆ ನೋಟರಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ: 19.12.1991ರ ಸರ್ಕಾರಿ ಆದೇಶ ಸಂಖ್ಯೆ: ಲಾ 87 ಎಲ್‌ಸಿಎಲ್ 1991.

2. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ, ಇವರ ಪತ್ರ ಸಂಖ್ಯೆ: ಎಂಟಿ:ನಂ:5543:2004 ದಿನಾಂಕ:27.5.2004.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ (1) ದಿನಾಂಕ: 19.12.1991ರ ಸರ್ಕಾರಿ ಆದೇಶದಲ್ಲಿ ಕೋಲಾರ ಜಿಲ್ಲೆಯ ಬಾಗೇಪಲ್ಲಿ ತಾಲ್ಲೂಕಿಗೆ ಒಂದು ನೋಟರಿ ಹುದ್ದೆಯನ್ನು ಮಂಜೂರು ಮಾಡಲಾಗಿತ್ತು.

ಸದರಿ ನೋಟರಿ ಹುದ್ದೆಗೆ ಮೇಲೆ (2)ರಲ್ಲಿ ಓದಲಾಗಿರುವ ದಿನಾಂಕ: 27.05.2004ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರು ಅರ್ಜಿಗಳನ್ನು ಆಹ್ವಾನಿಸಿ ಮೆಮೋರಿಯಲ್ಸ್‌ಗಳ ಜೊತೆ ನೇಮಕಾತಿ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 114 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 16ನೇ ಮೇ 2005**

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ, 1956ರ ನೋಟರಿ ನಿಯಮಾವಳಿಗಳ ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಸರ್ಕಾರವು 1952ರ ನೋಟರಿ ಅಧಿನಿಯಮ ಮತ್ತು ಅವುಗಳ ಅಡಿಯಲ್ಲಿ ರಚಿಸಲಾಗಿದ್ದ ನಿಯಮಗಳ ರೀತ್ಯ ಶ್ರೀ ಲಕ್ಷ್ಮೀಪತಿರೆಡ್ಡಿ ಬಿನ್ ಗಂಗಿರೆಡ್ಡಿ, ವಕೀಲರು, ನಂ.2ಬಿ:138, 'ಎ' ಡಿವಿಜನ್ ವೆಂಕಟೇಶ್ವರ ಟಾಕೀಸ್ ಹಿಂಭಾಗ, ಬಾಗೇಪಲ್ಲಿ ತಾಲ್ಲೂಕು, ಕೋಲಾರ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಬಾಗೇಪಲ್ಲಿ ಕಂದಾಯ ತಾಲ್ಲೂಕಿಗೆ ನೋಟರಿಯನ್ನಾಗಿ ನೇಮಿಸಿದೆ.

ಮೇಲೆ ಹೆಸರಿಸಲಾಗಿರುವ ವಕೀಲರು "0070 ಇತರೆ ಆಡಳಿತಾತ್ಮಕ ಸೇವೆಗಳು-01 ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳು" ಈ ಲೆಕ್ಕ ಶೀರ್ಷಿಕೆಗೆ ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ರೂಪಾಯಿ ಒಂದು ಸಾವಿಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಚಲಾನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡುತ್ತಿದ್ದ ಹಾಗೆ ಶ್ರೀಯುತರ ಹೆಸರನ್ನು 1952ರ ನೋಟರಿ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿಯಲ್ಲಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಮೇಲ್ಕಂಡ ಅಂಶಗಳ ಬಗೆಗಿನ ಎಲ್ಲಾ ವೆಚ್ಚವನ್ನು ಶ್ರೀಯುತರೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 753

**ಬಿ.ಎಸ್. ಈಶ್ವರ ಪ್ರಸಾದ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ, (ಆಡಳಿತ-2)

**PERSONNEL AND ADMINISTRATIVE REFORMS SECRETARIAT**

**CORRIGENDUM No: DPAR 232 SAS 2005, Bangalore, Dated: 28th May, 2005**

In Notification No.DPAR 232 SAS 2005, dated 10.5.2005 for the words "Karnataka Urban Infrastructure & Development Corporation" occuring in the fourth line of para 3 the words "Karnataka Urban Infrastructure Development & Finance Corporation" shall be substituted.

By Order and in the name of the Governor of Karnataka,

P.R. 754

**K. SUDHAKARA SHETTY**

Under Secretary to Government, DP & AR (Services-1)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ಬಿ. ದಯಾನಂದ, ಮುಖ್ಯ ಇಂಜಿನೀಯರ್, ಇವರು ಚೆನ್ನರಾಯಪಟ್ಟಣ ಜಿಲ್ಲಾ ಪಂಚಾಯತ್ ವಿಭಾಗದಲ್ಲಿ ಕಾರ್ಯಪಾಲಕ ಅಭಿಯಂತರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಎಸಗಿದ್ದರೆನ್ನಲಾದ ದುರ್ನಡತೆ ಬಗ್ಗೆ ಇಲಾಖಾ ವಿಚಾರಣೆ-ಅಂತಿಮ ಆದೇಶ ಕುರಿತು.

**ಓದಲಾಗಿದೆ:** 1. ಸರ್ಕಾರದ ನೋಟೀಸ್ ಸಂಖ್ಯೆ: ಸಿಆಸುಇ 103 ಎಸ್‌ಇಎನ್ 2002 ದಿನಾಂಕ: 9.10.2002.

2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 103 ಎಸ್‌ಇಎನ್ 2002 ದಿನಾಂಕ: 24.9.2003.

3. ವಿಚಾರಣಾಧಿಕಾರಿಯವರ ವರದಿ ದಿನಾಂಕ 27.5.2004.

4. ಲೋಕೋಪಯೋಗಿ ಇಲಾಖೆಯ ಅ.ಟಿ.ಸಂಖ್ಯೆ: ಲೋಇ 141 ಸಿಆರ್‌ಎಮ್ 04 ದಿನಾಂಕ 2.2.05 ಮತ್ತು 22.3.05.

**ಪ್ರಸ್ತಾವನೆ:**

ಶ್ರೀ ಬಿ. ದಯಾನಂದ ಪ್ರಸ್ತುತ ಮುಖ್ಯ ಇಂಜಿನೀಯರ್ ರವರು ಹಿಂದೆ 96-97ರ ಅವಧಿಯಲ್ಲಿ ಚೆನ್ನರಾಯಪಟ್ಟಣ ಜಿಲ್ಲಾ ಪಂಚಾಯತ್ ಇಂಜಿನೀಯರ್ ವಿಭಾಗದ ಕಾರ್ಯಪಾಲಕ ಅಭಿಯಂತರರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಅವರು ಎಸಗಿದ್ದರೆನ್ನಲಾದ ದುರ್ನಡತೆ ಸಂಬಂಧ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

1. ಮೆ: ಶಿವ ಮಿನರಲ್ಸ್, ಬೆಂಗಳೂರು ರವರಿಗೆ 1996ರಲ್ಲಿ ರೂ.1,80,435ನ್ನು 1,500 ಚೀಲ ಸಿಮೆಂಟ್ ಸರಬರಾಜಿಗಾಗಿ ಮುಂಗಡವಾಗಿ ಪಾವತಿಸಿದ್ದು ಇದು ಕ್ರಮಬದ್ಧವಲ್ಲವೆಂದು,
2. ಶಿವ ಮಿನರಲ್ಸ್ ರವರು ಕೇವಲ 250 ಮೂಟೆ ಸಿಮೆಂಟನ್ನು ಸರಬರಾಜು ಮಾಡಿ ಉಳಿಕೆ ಹಣ 1,50,362 ಹಣವನ್ನು 14.10.99ರವರೆಗೆ ಉಳಿಸಿಕೊಂಡು ಸರ್ಕಾರಕ್ಕೆ ತಾತ್ಕಾಲಿಕ ನಷ್ಟ ಉಂಟಾಗಿದೆಯೆಂದು,
3. ಶಿವ ಮಿನರಲ್ಸ್‌ರವರು ಶೇಕಡ 18 ಬಡ್ಡಿ ಹಾಗೂ ಲಿಟಿಗೇಷನ್ ಶುಲ್ಕ ರೂ.300ನ್ನು ಪಾವತಿಸದೆ ಇರುವುದರಿಂದ ಸರ್ಕಾರಕ್ಕೆ ನಷ್ಟ ಉಂಟಾಗಿದೆಯೆಂದು,
4. ಶಿವ ಮಿನರಲ್ಸ್ ಇವರು ಕರಾರಿನಂತೆ ಸರಬರಾಜು ಮಾಡದಿರುವುದರಿಂದ ಹಾಸನ ಜಿಲ್ಲಾ ಗ್ರಾಹಕರ ವೇದಿಕೆಯಲ್ಲಿ ಅವರ ವಿರುದ್ಧ ದಾಖಲು ಮಾಡಿದ ಪ್ರಕರಣಕ್ಕೆ ವಕೀಲರಿಗೆ ಖರ್ಚಾದ ರೂ.5,000/- ಸರ್ಕಾರಕ್ಕೆ ನಷ್ಟ ಉಂಟಾಗಿದೆ ಎಂದು ಹಾಗೂ ಶಿವ

ಮಿನರಲ್ಸ್‌ರವರು ಅಸಲನ್ನು ಮಾತ್ರ ಪಾವತಿಸಿದ್ದು ಬಡ್ಡಿ ಹಣದ ಬಗ್ಗೆ ಬೆಂಗಳೂರು ರಾಜ್ಯ ಗ್ರಾಹಕರ ವೇದಿಕೆಯಲ್ಲಿ ಅವರ ವಿರುದ್ಧ ಅಪೀಲು ಸಲ್ಲಿಸಿದ್ದು ತತ್ಸಂಬಂಧ ವಕೀಲರಿಗೆ ಖರ್ಚಾದ ರೂ.5,000-00 ಸರ್ಕಾರಕ್ಕೆ ಉಂಟಾದ ನಷ್ಟವೆಂದು,

ಅದರಂತೆ ಮೇಲೆ ಓದಲಾದ ಉಲ್ಲೇಖ (1)ರ ನೋಟೀಸಿನಲ್ಲಿ ಸದರಿ ದೋಷಾರೋಪಣೆಯನ್ನು ಆಪಾದಿತರಿಗೆ ಜಾರಿ ಮಾಡಲಾಗಿತ್ತು. ಆಪಾದಿತ ಅಧಿಕಾರಿಯು ಈ ದೋಷಾರೋಪಣೆಯನ್ನು ನಿರಾಕರಿಸಿದ್ದರಿಂದ ಅವರ ಮೇಲಿನ ಆರೋಪಗಳ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ಮೇಲೆ ಓದಲಾದ ಉಲ್ಲೇಖ (2)ರ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಎಂ.ಎಸ್. ನಟರಾಜಮೂರ್ತಿ ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ವಿಚಾರಣೆಯನ್ನು ಕೈಗೊಂಡ ವಿಚಾರಣಾಧಿಕಾರಿಗಳು ಉಲ್ಲೇಖ (3)ರ ವರದಿಯಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿ 95-96ರ ಸಾಲಿನ ಆಯವ್ಯಯದಲ್ಲಿ ಹೊಳೆನರಸೀಪುರ ಮತ್ತು ಅರಸೀಕೆರೆ ಪಟ್ಟಣಗಳಲ್ಲಿ ಅಭಿವೃದ್ಧಿ ಕಾಮಗಾರಿಗಳಾದ ನೀರು ಪೂರೈಕೆ ತುರ್ತು ಕಾಮಗಾರಿಗಳಿಗೆ ಒದಗಿಸಿದ್ದ ಹಣವನ್ನು ದಿನಾಂಕ 31.3.96ರೊಳಗೆ ವಿನಿಯೋಗ ಮಾಡಿಕೊಳ್ಳಬೇಕಾಗಿದ್ದು ಆ ಸಮಯದಲ್ಲಿ ಸಿಮೆಂಟ್ ಲಭ್ಯತೆ ಮಾರುಕಟ್ಟೆಯಲ್ಲಿ ತೀವ್ರ ಕೊರತೆಯಲ್ಲಿದ್ದುದರಿಂದ ಮುಂಗಡ ಹಣವನ್ನು ಮೆ: ಶಿವ ಮಿನರಲ್ಸ್‌ರವರಿಗೆ ಪಾವತಿಸಿರುತ್ತಾರೆಂದು ಆದರೆ ಸಿಮೆಂಟ್‌ನ್ನು ಸರಬರಾಜು ಮಾಡಲು ಸಾಧ್ಯವಾಗದೆ ಸದರಿ ಸಂಸ್ಥೆಯು ಹಣವನ್ನು ವಾಪಸ್ಸು ನೀಡಿರುತ್ತಾರೆಂದು, ಆಯವ್ಯಯವನ್ನು ನಿಗದಿತ ಸಮಯದೊಳಗೆ ಬಳಸಿಕೊಳ್ಳುವ ಮತ್ತು ಅಭಿವೃದ್ಧಿ ಕಾರ್ಯಗಳ ಹಿತದೃಷ್ಟಿಯಿಂದ ಎಸ್.ಪಿ.ಡಿ. ಕರಾರಿನಲ್ಲಿ ಒಳಗೊಂಡಿರುವ ಶಿವ ಮಿನರಲ್ಸ್‌ರವರಿಗೆ ನೀಡಿರುವ ಮುಂಗಡಕ್ಕೆ ಲೋಕೋಪಯೋಗಿ ಸಂಹಿತೆ ಪ್ರಕಾರ ಅವಕಾಶವಿದೆಯೆಂದು, ಈ ರೀತಿ ಮುಂಗಡ ಹಣವನ್ನು ಹಿಂದೆಯೂ ಸಹ ಮಾಡಲಾಗುತ್ತಿದ್ದು ಸದರಿ ವಿಷಯವು ಮುಖ್ಯ ಅಭಿಯಂತರರ ಕಾರ್ಯಾಲಯಕ್ಕೂ ತಿಳಿದಿರುತ್ತದೆಂದು, ಗ್ರಾಹಕರ ವೇದಿಕೆ ಶಿವ ಮಿನರಲ್ಸ್‌ರವರ ವಿರುದ್ಧ ದೂರು ದಾಖಲಿಸಲು ಉಂಟಾದ ಖರ್ಚಿಗೆ ಆಪಾದಿತರನ್ನು ಜವಾಬ್ದಾರರನ್ನಾಗಿ ಮಾಡುವುದು ಸಾಧ್ಯವಿಲ್ಲವೆಂದೂ ತಮ್ಮ ವಿಚಾರಣಾ ವರದಿಯಲ್ಲಿ ಅಭಿಪ್ರಾಯವನ್ನು ನೀಡುತ್ತಾ ಅವರ ಮೇಲಿನ ದೋಷಾರೋಪಣೆಗಳು ಸಾಬೀತಾಗಿಲ್ಲವೆಂದು ವರದಿ ನೀಡಿರುತ್ತಾರೆ.

ವಿಚಾರಣಾಧಿಕಾರಿಯವರ ವರದಿಯನ್ನು ಮೇಲೆ ಉಲ್ಲೇಖ (4)ರಲ್ಲಿ ಓದಲಾದ ಟಿಪ್ಪಣಿಯೊಂದಿಗೆ ಪರಿಶೀಲಿಸಲಾಗಿದೆ. ಆಪಾದಿತ ಅಧಿಕಾರಿಯ ಕ್ರಮದಿಂದ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲವೆಂದು ಸಿಮೆಂಟ್ ಮತ್ತು ಇತರೆ ಸಾಮಗ್ರಿಗಳನ್ನು ಖರೀದಿಸಲು ಜಿಲ್ಲಾ ಪಂಚಾಯತ್ ಹಾಸನ ಖರೀದಿ ಸಮಿತಿ ಸಭೆಯು ಅನುಮತಿ ನೀಡಿದೆಯೆಂದು ಟೆಂಡರ್ ಕಾಮಗಾರಿಗಳ ಜೊತೆಗೆ ಬೇರೆ ಕಾಮಗಾರಿಗಳನ್ನು ಇಲಾಖಾ ವತಿಯಿಂದ ನಿರ್ವಹಿಸಲಾಗಿದ್ದು ಕಾಮಗಾರಿಗಳಿಗೆ ಬೇಕಾದ ಸಿಮೆಂಟ್ ಮತ್ತು ಇತರೆ ಸಾಮಗ್ರಿಗಳನ್ನು ಇಲಾಖಾ ವತಿಯಿಂದ ಸರಬರಾಜು ಮಾಡಲಾಗಿದೆಯೆಂದು ಜಿಲ್ಲಾ ಪಂಚಾಯಿತಿಗೆ ಆರ್ಥಿಕವಾಗಿ ಯಾವುದೇ ನಷ್ಟವಾಗಿಲ್ಲವೆಂದು ಲೋಕೋಪಯೋಗಿ ಇಲಾಖೆಯು ಅಭಿಪ್ರಾಯ ಪಟ್ಟಿದೆ. ಈ ಅಭಿಪ್ರಾಯವನ್ನು ಪರಿಶೀಲಿಸಲಾಗಿ ಲೋಕೋಪಯೋಗಿ ಇಲಾಖೆಯ ಸಂಹಿತೆಯನ್ನು ಮತ್ತು ಷೆಡ್ಯೂಲ್ ದರಗಳನ್ನು ಜಿಲ್ಲಾ ಪಂಚಾಯತ್ ಸಹ ಅನುಸರಿಸುತ್ತಿರುವುದು ಕಂಡು ಬರುತ್ತದೆ. ಜಿಲ್ಲಾ ಪಂಚಾಯತ್ ಹಣವನ್ನು ಉಪಯೋಗಿಸಿ ಗುತ್ತಿಗೆದಾರರಿಗೆ ಸಾಮಗ್ರಿ ಖರೀದಿಸಲು ಮುಂಗಡ ಪಾವತಿಸುವ ಕ್ರಮವು ಸರಿಯಿಲ್ಲದಿದ್ದಲ್ಲಿ ಅದನ್ನು ಸದರಿ ಕಾರ್ಯಪಾಲಕ ಅಭಿಯಂತರರು ಸರ್ಕಾರದ ಗಮನಕ್ಕೆ ತಂದು ಸರ್ಕಾರದ ಅನುಮತಿಯನ್ನು ಪಡೆಯಬಹುದಾಗಿತ್ತು. ಆದ್ದರಿಂದ ಆಪಾದಿತರ ಈ ಕ್ರಮದಿಂದ ನಿಖರವಾಗಿ ಇಷ್ಟೇ ನಷ್ಟವಾಗಿದೆ ಎಂಬುದನ್ನು ಹೇಳಲು ಕಷ್ಟಸಾಧ್ಯವಾದರೂ ಜಿಲ್ಲಾ ಪಂಚಾಯತ್‌ಗೆ ಸ್ವಲ್ಪ ಆರ್ಥಿಕ ನಷ್ಟ ಉಂಟಾಗಿರುವುದು ವಿಧಿತವಾಗುತ್ತದೆ.

ಮೇಲ್ಕಂಡ ವಾದ ಮತ್ತು ಅಭಿಪ್ರಾಯಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 103 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 28.5.2005**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಬಿ. ದಯಾನಂದ್, ಮುಖ್ಯ ಇಂಜಿನೀಯರ್ ಇವರಿಗೆ ಎಚ್ಚರಿಕೆಯನ್ನು ನೀಡುವ ಮೂಲಕ ಇವರ ಮೇಲಿನ ಆರೋಪಗಳ ಕುರಿತಂತೆ ವಿಚಾರಣಾಧಿಕಾರಿ ಸಲ್ಲಿಸಿರುವ ವಿಚಾರಣಾ ವರದಿಯನ್ನು ಒಪ್ಪಿ ಸರ್ಕಾರವು ಅವರನ್ನು ಅವರ ಮೇಲಿನ ಆರೋಪಗಳಿಂದ ದೋಷಮುಕ್ತರನ್ನಾಗಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ, ಶ್ರೀ ಬಿ. ದಯಾನಂದ ಅವರು ಯಾವ ಸೌಲಭ್ಯಗಳಿಗೆ ಅರ್ಹರಿದ್ದರೋ ಆ ಎಲ್ಲಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆಂದು ಸರ್ಕಾರವು ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಚ್.ಆರ್. ನಾಗೇಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಸೇವೆಗಳು-3)

ಪಿ.ಆರ್. 755

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** 2005-2006ನೇ ಸಾಲಿನಿಂದ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳ ಮತ್ತು ಗ್ರಾಮೀಣ ಶಾಲಾ ವಿಜ್ಞಾನ ಕೇಂದ್ರಗಳ ಸ್ಥಾಪನೆಗೆ ಈಗ ನೀಡುತ್ತಿರುವ ಅನುದಾನವನ್ನು ಸ್ಥಗಿತಗೊಳಿಸುವ (ನಿಲ್ಲಿಸುವ) ಬಗ್ಗೆ.

**ಓದಲಾಗಿದೆ:** 1. ಕ.ರಾ.ವಿ.ಪ.ನಲ್ಲಿ ನಡೆದ ದಿನಾಂಕ: 11.1.2005ರ ಸಭೆ ನಡವಳಿ.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವರ ಅಧ್ಯಕ್ಷತೆಯಲ್ಲಿ ದಿನಾಂಕ:11.1.2005 ರಂದು ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನಲ್ಲಿ ನಡೆದ ಸಭೆಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಅಂಗ ಸಂಸ್ಥೆಗಳ ಕಾರ್ಯಪ್ರಗತಿ ಪರಿಶೀಲನಾ ಸಭೆಯಲ್ಲಿ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳು ಜಿಲ್ಲಾ ಕೇಂದ್ರಗಳಲ್ಲೂ ಮತ್ತು ತಾಲ್ಲೂಕು ಕೇಂದ್ರಗಳಲ್ಲೂ ಹಾಗೂ ಇತರೆ ಕೇಂದ್ರಗಳಲ್ಲೂ ಕಾರ್ಯನಿರ್ವಹಿಸುತ್ತಿದ್ದು, ಜಿಲ್ಲಾ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳಿಗೆ ಮಾತ್ರ ಈ ಇಲಾಖೆಯಿಂದ ಅನುದಾನವನ್ನು ಒದಗಿಸಬಹುದೆಂದು ಇತರೆಡೆ ಕಾರ್ಯನಿರ್ವಹಿಸುತ್ತಿರುವ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳಿಗೆ ನೆರವನ್ನು ನಿಲ್ಲಿಸಿ, ಮತ್ತು ಅವುಗಳು ಸ್ವಶಕ್ತಿ ಮೇಲೆ ಕಾರ್ಯನಿರ್ವಹಿಸುವಂತೆ ಪ್ರೇರೇಪಿಸುವುದು, ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳನ್ನು ಜಿಲ್ಲಾ ವಿಜ್ಞಾನ ಕೇಂದ್ರಗಳಾಗಿ ಮೇಲ್ದರ್ಜೆಗೇರಿಸಿ ಉನ್ನತೀಕರಿಸುವುದು. ಹಾಗೂ ಗ್ರಾಮೀಣ ಶಾಲಾ/ಕಾಲೇಜುಗಳಲ್ಲಿ ಗ್ರಾಮೀಣ ಶಾಲಾ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸಲು ಈಗ ನೀಡುತ್ತಿರುವ 50,000-00ರೂ.ಗಳ ಅನುದಾನದ ವಿಜ್ಞಾನ ಪರಿಕರಗಳ ನೆರವನ್ನು 2005-06ನೇ ಸಾಲಿನಿಂದ ನಿಲ್ಲಿಸುವಂತೆ ಸಭೆಯಲ್ಲಿ ತೀರ್ಮಾನಿಸಿರುತ್ತದೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಬಿಟಿ 35 ರಾವಿಪ 2005, ಬೆಂಗಳೂರು, ದಿನಾಂಕ: 21ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ, ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳು ಪ್ರಸ್ತುತ ಜಿಲ್ಲಾ ಕೇಂದ್ರಗಳಲ್ಲೂ ಮತ್ತು ತಾಲ್ಲೂಕು ಕೇಂದ್ರಗಳಲ್ಲೂ ಹಾಗೂ ಇತರೆ ಕೇಂದ್ರಗಳಲ್ಲೂ ಕಾರ್ಯನಿರ್ವಹಿಸುತ್ತಿದ್ದು, 2005-06ನೇ ಸಾಲಿನಿಂದ ಜಿಲ್ಲಾ ಕೇಂದ್ರಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳಿಗೆ ಮಾತ್ರ ಈ ಇಲಾಖೆಯಿಂದ ಅನುದಾನವನ್ನು ಒದಗಿಸಲಾಗುವುದು. ಹಾಗೂ ಇತರೆಡೆ ಕಾರ್ಯನಿರ್ವಹಿಸುತ್ತಿರುವ ದೊಡ್ಡ ಪ್ರಮಾಣದ ವಿಜ್ಞಾನ ಕೇಂದ್ರಗಳಿಗೆ ನೆರವನ್ನು ನಿಲ್ಲಿಸಲಾಗಿದೆ.

ಹಾಗೂ ಗ್ರಾಮೀಣ ಶಾಲಾ/ಕಾಲೇಜುಗಳಲ್ಲಿ ಗ್ರಾಮೀಣ ಶಾಲಾ ವಿಜ್ಞಾನ ಕೇಂದ್ರಗಳನ್ನು ಸ್ಥಾಪಿಸಲು ನೀಡುತ್ತಿರುವ 50,000-00 ರೂ.ಗಳ ಅನುದಾನದ ವಿಜ್ಞಾನ ಪರಿಕರಗಳ ನೆರವನ್ನು 01.4.2005 ರಿಂದ ಜಾರಿಗೆ ಬರುವಂತೆ ನಿಲ್ಲಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 756

**ಬಿ. ಶಿವರುದ್ರಸ್ವಾಮಿ**

ಪೀಠಾಧಿಕಾರಿ, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ:** ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಅಮರ್ಜಾ ಯೋಜನೆಯಡಿಯಲ್ಲಿ ಮುಳುಗಡೆಯಾಗಿರುವ ಭೂಸ್ವಾಧೀನ ಪ್ರಕರಣಗಳಿಗಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಮುಖ್ಯ ಇಂಜಿನಿಯರ್, ನೀರಾವರಿ ಯೋಜನೆಗಳ ವಲಯ, ಗುಲ್ಬರ್ಗಾರವರ ಪತ್ರ ಸಂಖ್ಯೆ: ನೀಯೋವ/ಮುಇಂಗು/ಬಜೆಟ್/2004-05/4475, ದಿ: 7/1/2005.
2. ಸರ್ಕಾರದ ಆದೇಶ ಸಂಖ್ಯೆ: ಜಸಂಇ 29 ಎಂಟಿಜೆಡ್ 2004, ದಿ:18.4.2005.

**ಪ್ರಸ್ತಾವನೆ:**

ಗುಲ್ಬರ್ಗಾ ಜಿಲ್ಲೆ ಆಳಂದ ತಾಲ್ಲೂಕಿನ ಅಮರ್ಜಾ ಯೋಜನೆಯಡಿಯಲ್ಲಿ ಮುಳುಗಡೆಯಾಗಿರುವ ನಿಂಬರ್ಗ, ಕಾರಭೋಸಗಾ, ಜವಳಿ ಹಾಗೂ ಇತರೆ ಗ್ರಾಮಗಳಲ್ಲಿ ಭೂಸ್ವಾಧೀನ ಪ್ರಕರಣಗಳಲ್ಲಿ ನ್ಯಾಯಾಲಯದ ತೀರ್ಪಿನಂತೆ ಹೆಚ್ಚಿನ ಪರಿಹಾರಕ್ಕಾಗಿ ಠೇವಣಿ ಮಾಡಬೇಕಾಗಿದ್ದು, ನ್ಯಾಯಾಲಯದ ಆದೇಶದ ಪ್ರಯುಕ್ತ ಈ ಕೆಳಗಿನ ತಖ್ತೆಯಲ್ಲಿ ತಿಳಿಸಿರುವಂತೆ ಅನುದಾನ ಬಿಡುಗಡೆ ಮಾಡಲು ಮುಖ್ಯ ಇಂಜಿನಿಯರ್, ಗುಲ್ಬರ್ಗಾರವರು ಮೇಲೆ ಓದಲಾಗಿದೆ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ವಿನಂತಿಸಿರುತ್ತಾರೆ.

| ಕ್ರ. ಸಂ. | ಪ್ರಕರಣ ಸಂಖ್ಯೆ | ಗ್ರಾಮ | ಕೋರ್ಟ್ ಆದೇಶದ ಪ್ರಕಾರ ಕೊಡಬೇಕಾಗಿರುವ ಮೊತ್ತ |
|---|---|---|---|
| 1. | LAC No. 854/2000 | ನಿಂಬರ್ಗ | ರೂ. 3,59,284.00 |
| 2. | LAC No. 855/2000 | ನಿಂಬರ್ಗ | ರೂ. 3,54,033.00 |
| 3. | LAC No. 670/2001 | ಕಾರಭೋಸಗಾ | ರೂ. 2,76,454.00 |
| 4. | LAC No. 672/2001 | ಕಾರಭೋಸಗಾ | ರೂ. 1,34,640.00 |
| 5. | LAC No. 673/2001 | ಕಾರಭೋಸಗಾ | ರೂ. 43,734.00 |
| 6. | LAC No. 674/2001 | ಗೌಡಗಾವ್ | ರೂ. 1,87,481.00 |
| 7. | LAC No. 675/2001 | ಗೌಡಗಾವ್ | ರೂ. 96,967.00 |
| 8. | LAC No. 676/2001 | ಗೌಡಗಾವ್ | ರೂ. 1,04,907.00 |
| 9. | LAC No. 144/1997 | ಜವಳಿ (ಡಿ) | ರೂ. 1,45,466.00 |
| 10. | LAC No. 797/2000 | ಜವಳಿ (ಡಿ) | ರೂ. 1,21,141.00 |
| 11. | LAC No. 798/2000 | ಜವಳಿ (ಡಿ) | ರೂ. 88,087.00 |
| 12. | LAC No. 819/2000 | ಜವಳಿ (ಡಿ) | ರೂ. 88,107.00 |
| 13. | LAC No. 820/2000 | ಜವಳಿ (ಡಿ) | ರೂ. 16,963.00 |
| 14. | LAC No. 821/2000 | ಜವಳಿ (ಡಿ) | ರೂ. 1,17,999.00 |
| 15. | LAC No. 822/2000 | ಜವಳಿ (ಡಿ) | ರೂ. 18,984.00 |
| 16. | LAC No. 823/2000 | ಜವಳಿ (ಡಿ) | ರೂ. 3,17,830.00 |
| 17. | LAC No. 617/1997 | ಚಂಗಾಪುರ್ | ರೂ. 1,09,792.00 |
| 18. | LAC No. 719/1999 | ಕಾರಭೋಸಗಾ | ರೂ. 1,37,932.00 |
| 19. | LAC No. 720/1999 | ಕಾರಭೋಸಗಾ | ರೂ. 1,10,385.00 |
| 20. | LAC No. 721/1999 | ಕಾರಭೋಸಗಾ | ರೂ. 1,18,256.00 |
| 21. | LAC No. 722/1999 | ಕಾರಭೋಸಗಾ | ರೂ. 1,02,515.00 |
| 22. | LAC No. 723/1999 | ಕಾರಭೋಸಗಾ | ರೂ. 74,969.00 |
| 23. | LAC No. 724/1999 | ಕಾರಭೋಸಗಾ | ರೂ. 69,066.00 |
| 24. | LAC No. 725/1999 | ಕಾರಭೋಸಗಾ | ರೂ. 1,53,673.00 |
| | | **ಒಟ್ಟು** | **ರೂ. 33,48,665.00** |

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಸರ್ಕಾರಿ ಆದೇಶದಲ್ಲಿ ಅಮರ್ಜಾ ಯೋಜನೆಯನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತ ವ್ಯಾಪ್ತಿಗೆ ಹಸ್ತಾಂತರಿಸಿ, 2005-06ನೇ ಸಾಲಿನಲ್ಲಿ ಸದರಿ ಯೋಜನೆಯ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕ್ರಮ ಕೈಗೊಳ್ಳುವಂತೆ ಆದೇಶಿಸಲಾಗಿದ್ದು,

ಅದರಂತೆ ಈ ಯೋಜನೆಗೆ ಸಂಬಂಧಿಸಿದ ಎಲ್ಲಾ ಆಸ್ತಿ ಮತ್ತು ಹೊರೆ ಕರ್ನಾಟಕ ನೀರಾವರಿ ನಿಗಮ ನಿಯಮಿತದ ಜವಾಬ್ದಾರಿಯಾಗಿದ್ದು, ಮುಖ್ಯ ಇಂಜಿನಿಯರ್‌ರವರ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ವಿನಂತಿಸಿರುವುದನ್ನು ಪರಿಗಣಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 18 ಎಂಟಿಜೆಡ್ 2005, ಬೆಂಗಳೂರು, ದಿನಾಂಕ: 23ನೇ ಮೇ 2005**

ಗುಲ್ಬರ್ಗಾ ಜಿಲ್ಲೆಯ ಆಳಂದ ತಾಲ್ಲೂಕಿನ ಸಂಗೋಳಗಿ ಗ್ರಾಮದ ಬಳಿ ನಿರ್ಮಿಸಲಾಗುತ್ತಿರುವ ಅಮರ್ಜಾ ಮಧ್ಯಮ ನೀರಾವರಿ ಯೋಜನೆಯಲ್ಲಿ ಮುಳುಗಡೆಯಾಗಿರುವ ನಿಂಬರ್ಗ, ಕಾರಭೋಸಗಾ, ಜವಳಿ (ಡಿ) ಹಾಗೂ ಮತ್ತಿತರೆ ಗ್ರಾಮಗಳ ಜಮೀನುಗಳಿಗೆ ಎಲ್‌ಎಕ್ಯೂ ಪ್ರಕರಣ ಸಂಖ್ಯೆ: 854/2000, 855/2000, 670/01, 672/2001 ರಿಂದ 676/01 ರವರೆಗೆ, 144/97, 819 ರಿಂದ 823/2000 ವರೆಗೆ, 617/99, 719/99 ರಿಂದ 725/99 ಗಳಲ್ಲಿ ರೂ.31,39,437-00 ಗಳನ್ನು ಮಾತ್ರ (ಮೂವತ್ತೊಂದು ಲಕ್ಷದ ಮೂವತ್ತೊಂಬತ್ತು ಸಾವಿರದ ನಾಲ್ಕು ನೂರಾ ಮೂವತ್ತೇಳು ರೂ.ಗಳು ಮಾತ್ರ) ಭೂಸ್ವಾಧೀನ ಪರಿಹಾರ ಧನವನ್ನು ಕರ್ನಾಟಕ ನೀರಾವರಿ ನಿಗಮ ನಿಯಮಿತ ವತಿಯಿಂದ ನ್ಯಾಯಾಲಯದಲ್ಲಿ ಠೇವಣಿ ಇರಿಸಲು ಆದೇಶಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಲೋಇ 186 ಆಕೋ-1 2005, ದಿ:2.5.2005ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಐ.ಡಿ. ಧಮನ್**

ಪಿ.ಆರ್. 757

ಸರ್ಕಾರದ ಅಧೀನ ಕಾರ್ಯದರ್ಶಿ (ತಾಂತ್ರಿಕ),

ಜಲ ಸಂಪನ್ಮೂಲ ಇಲಾಖೆ (ಕೃಭಾಜನಿನಿ ವಿ.ಕೋಶ)

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ:** ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಲಯಕ್ಕೆ ಸಂಬಂಧಿಸಿದ ಮುಂದುವರಿದ ಯೋಜನೆಯನ್ನು 2005-06ನೇ ಸಾಲಿನಲ್ಲಿ ದಿನಾಂಕ:1.4.2005 ರಿಂದ ದಿ:31.3.2006ರ ಅವಧಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ.ವಿಯಇ 105 ವಿತ್ರಮ 2003, ದಿನಾಂಕ:4.5.2004.
2. ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ:21.5.2005 ರಂದು ನಡೆದ ಸಭೆಯ ನಡವಳಿ ಸಂಖ್ಯೆ: ಐಟಿಡಿ 19 ಅಡವಿ 2005.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿನ ಸರ್ಕಾರಿ ಆದೇಶದಲ್ಲಿ ಆರ್ಥಿಕ ಇಲಾಖೆಯಿಂದ ಒದಗಿಸಲಾದ ರೂ.206.00 ಲಕ್ಷ ರೂ.ಗಳನ್ನು ಈ ಇಲಾಖೆಯ ಕಾರ್ಯಚಟುವಟಿಕೆಗಳಿಗೆ ಹಾಗೂ ಯೋಜನೆಗಳಿಗೆ 2004-05ನೇ ಸಾಲಿನಲ್ಲಿ ಸದುಪಯೋಗಪಡಿಸಿಕೊಳ್ಳಲಾಗಿದೆ.

ಮೇಲೆ ಓದಲಾದ (2)ರಲ್ಲಿನ ನಡವಳಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ ವಲಯಕ್ಕೆ ಸಂಬಂಧಿಸಿದಂತೆ, ಈ ಕೆಳಕಂಡ ಯೋಜನೆಗಳನ್ನು ಮುಂದುವರೆಸಲು ತೀರ್ಮಾನಿಸಿದೆ.

1. ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರ ವಿದ್ಯಾ ಮಂಡಳಿಗೆ-ಸಹಾಯಾನುದಾನ
2. ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್‌ಗೆ-ಸಹಾಯಾನುದಾನ
3. ಜವಹರ್ ಲಾಲ್ ನೆಹರು ತಾರಾಲಯಕ್ಕೆ (ಬೇಸ್)-ಸಹಾಯಾನುದಾನ
4. ಇತರೆ ವೈಜ್ಞಾನಿಕ ಸಂಸ್ಥೆಗಳಿಗೆ-ಸಹಾಯಾನುದಾನ
5. ಇತರೆ ವೈಜ್ಞಾನಿಕ ಕಾರ್ಯಚಟುವಟಿಕೆಗಳಿಗೆ-ಸಹಾಯಾನುದಾನ
6. ವಿಜ್ಞಾನ ನಗರ (ಧಾರವಾಡ)ಕ್ಕೆ-ಸಹಾಯಾನುದಾನ
7. ವಿಜ್ಞಾನ ಮತ್ತು ತಂತ್ರಜ್ಞಾನ ಯೋಜನೆಗಳಿಗೆ-ಸಹಾಯಾನುದಾನ (ಹೊಸ ಯೋಜನೆ)
8. ಬರ ಪರಿಹಾರ ಉಸ್ತುವಾರಿ ಕೋಶಕ್ಕೆ - ಸಹಾಯಾನುದಾನ
9. ಭಾರತೀಯ ವಿಜ್ಞಾನ ಸಂಸ್ಥೆ, ಬೆಂಗಳೂರು-ಅಂಶದಾನ

ಅದರಂತೆ, ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 80 ವಿತ್ರಮ 2004, ಬೆಂಗಳೂರು, ದಿನಾಂಕ: 30ನೇ ಮೇ 2005**

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆಯ ವಿಜ್ಞಾನ ಮತ್ತು ತಂತ್ರಜ್ಞಾನ ವಲಯದಲ್ಲಿ ಚಾಲ್ತಿಯಲ್ಲಿರುವ ಅನುಬಂಧದಲ್ಲಿ ಸೂಚಿಸಿರುವ ಯೋಜನೆಗಳನ್ನು 2005-06ನೇ ಸಾಲಿನಲ್ಲಿ ದಿನಾಂಕ: 1.4.2005 ರಿಂದ 31.3.2006ರ ಅವಧಿಗೆ ಮುಂದುವರಿಸಲು ಹಾಗೂ ಇದೇ ಸಾಲಿನಲ್ಲಿ ಅನುಬಂಧದಲ್ಲಿ ಸೂಚಿಸಿರುವ ಯೋಜನೆಗಳಿಗೆ ಸರ್ಕಾರವು ಮಂಜೂರಾತಿ ನೀಡಿ, ಪ್ರಸ್ತಾವನೆಯಲ್ಲಿ ಹೇಳಿರುವ ಸಂಸ್ಥೆ ಹಾಗೂ ಮಂಡಳಿಗಳಿಗೆ ಕಂತುಗಳ ರೂಪದಲ್ಲಿ ಅನುದಾನ (ಹಣ) ಬಿಡುಗಡೆ ಮಾಡಲು ಸರ್ಕಾರವು ಆದೇಶಿಸಿದೆ. ಹೊಸ ಯೋಜನೆಗಳಿಗೆ ಸಂಬಂಧಿಸಿದಂತೆ ಮುಂದೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ವಿ. ಸತ್ಯನಾರಾಯಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

**ಅನುಬಂಧ**

**ಸರ್ಕಾರಿ ಆದೇಶ ಸಂಖ್ಯೆ: ವಿಯಇ 80 ವಿತ್ರಮ 2004, ಬೆಂಗಳೂರು, ದಿನಾಂಕ: 30ನೇ ಮೇ 2005**

| ಕ್ರ. ಸಂ. | ಲೆಕ್ಕ ಶೀರ್ಷಿಕೆ | ಯೋಜನೆಗಳಿಗೆ/ಸಂಸ್ಥೆಗಳಿಗೆ/ಚಟುವಟಿಕೆಗಳಿಗೆ ಸಹಾಯಾನುದಾನ ವಿವರ | ಆಯವ್ಯಯದಲ್ಲಿನ ಹಂಚಿಕೆ | ಇಲಾಖೆಯ ಹಂಚಿಕೆ |
|---|---|---|---|---|
| 1. | 1) 3425-60-200-0-01 (101) (ಯೋ) | ವೈಜ್ಞಾನಿಕ ಸಂಸ್ಥೆಗಳಿಗೆ ಸಹಾಯಾನುದಾನ | 113.00 | - |
| | | **I ಮುಂದುವರೆದ ಯೋಜನೆಗಳು:** | | |
| | | 1) ಕರ್ನಾಟಕ ರಾಜ್ಯ ವಿಜ್ಞಾನ ಮತ್ತು ತಂತ್ರವಿದ್ಯಾ ಮಂಡಳಿ | - | 25.00 |
| | | ಅ) NRDMS ಯೋಜನೆಗೆ | - | 10.00 |
| | | ಆ) ವಿಜ್ಞಾನಿಗಳಿಗೆ ಪ್ರಶಸ್ತಿ ಹಾಗೂ ಅದರ ಸಮಾರಂಭಕ್ಕೆ | | 10.00 |
| | | 2) ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು | | 05.00 |
| | | ಅ) ಯುವ ವಿಜ್ಞಾನಿಗಳಿಗೆ ಪ್ರಶಸ್ತಿ ನೀಡುವ ಬಗ್ಗೆ. | | 03.00 |
| | | ಆ) ಜಿಲ್ಲಾ ವಿಜ್ಞಾನ ಕೇಂದ್ರಗಳಿಗೆ ಸಹಾಯಾನುದಾನ | | 10.00 |
| | | ಇ) ವೈಜ್ಞಾನಿಕ ಜಾಗೃತಿ ವರ್ಷ ರಾಷ್ಟ್ರೀಯ ಮಕ್ಕಳ ವಿಜ್ಞಾನ ಸಮಾವೇಶ. | | 4.00 |
| | | ಈ) ವಿಜ್ಞಾನ ಭವನ, ಬೆಂಗಳೂರು. | | 15.00 |
| | | 3) ಜವಹರ್‌ಲಾಲ್ ನೆಹರು ತಾರಾಲಯ | | 16.00 |
| | | 4) ಇತರೆ ವೈಜ್ಞಾನಿಕ ಸಂಸ್ಥೆಗಳು/ ಚಟುವಟಿಕೆಗಳಿಗೆ | | 15.00 |
| | | | | **113.00** |
| | 2) 3425-60-600-0-01 (ಯೋ) | II) ವಿಜ್ಞಾನ ನಗರ, ಧಾರವಾಡ | 110.00 | 110.00 |
| | 3) 3425-60-200-0-001 (104) ಅಂಶದಾನ (ಯೋಜನೇತರ) | III) ಭಾರತೀಯ ವಿಜ್ಞಾನ ಸಂಸ್ಥೆ | 1.00 (NP) | 1.00 |
| | 4) 3425-00-200-0-01 (ಯೋ) | IV) ಬರ ಪರಿಹಾರ ಉಸ್ತುವಾರಿ ಕೋಶ | 27.00 | 27.00 |
| | | | **251.00** | **251.00** |

**ಎಸ್.ವಿ. ಸತ್ಯನಾರಾಯಣಮೂರ್ತಿ**
ಪಿ.ಆರ್. 770 ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ, ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ.

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಮೈಸೂರು ಕೇಂದ್ರ ಕಛೇರಿಯನ್ನು ಮೈಸೂರಿನಿಂದ ಬೆಂಗಳೂರಿಗೆ ಸ್ಥಳಾಂತರಿಸುವ ಬಗ್ಗೆ.

**ಓದಲಾಗಿದೆ:**
1. ಸಂಕಇ 12 ಕೆಎಂಯು 2004 ದಿ: 25.3.2004.
2. ಸಂಕಇ 17 ಕೆಎಂಯು 2004 ದಿ: 16.2.2005.
3. ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಆಯುಕ್ತರ ಟಿಪ್ಪಣಿ ಸಂಖ್ಯೆ: ಪ್ರಾಸಪ/ಅಕ/2/2003-04 ದಿ: 28.2.2004.
4. ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಆಯುಕ್ತರ ಪತ್ರ ಸಂಖ್ಯೆ: ಆಪ್ರಸಂಪ:ಮೈಕ:2005-06 ದಿ: 13.5.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಮೈಸೂರು ಹುದ್ದೆಯನ್ನು ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ, ಮೈಸೂರು ಈ ಹುದ್ದೆಯನ್ನು ದಿ: 11.2.2005 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಮೈಸೂರಿನಲ್ಲಿರುವ ಆಯುಕ್ತರು, ಪಾರಂಪರಿಕ ಮತ್ತು ವಸ್ತುಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಟಿಪ್ಪಣಿಯಲ್ಲಿ ಕೇಂದ್ರ ಕಛೇರಿಯನ್ನು ಬೆಂಗಳೂರಿನಲ್ಲಿ ಸ್ಥಾಪಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಿರುತ್ತಾರೆ ಮತ್ತು ಇದಕ್ಕೆ ಸಮರ್ಥನೆಯಾಗಿ ಈ ಕೆಳಕಂಡ ಅಂಶಗಳನ್ನು ಸರ್ಕಾರದ ಮುಂದೆ ಇಟ್ಟಿರುತ್ತಾರೆ.

ಅ) ಪರಂಪರೆ ಸಂರಕ್ಷಣೆಗಾಗಿ ಈ ಇಲಾಖೆಯು ಇತರೇ ಇಲಾಖೆಗಳು, ಪ್ರಾಧಿಕಾರಗಳು, ಸರ್ಕಾರೇತರ ಸಂಸ್ಥೆಗಳ ಮೂಲಕವೇ ಕಾರ್ಯ ನಿರ್ವಹಿಸಬೇಕಾಗುತ್ತದೆ. ಏಕೆಂದರೆ ಈ ಇಲಾಖೆಗೆ ತನ್ನದೇ ಆದ ಕನಿಷ್ಠ ಪ್ರಮಾಣದ ಸಿಬ್ಬಂದಿ ಮತ್ತು ಸಂಪನ್ಮೂಲ ಮಾತ್ರ ಇರುವುದು. ಹೆಚ್ಚಿನ ರೀತಿಯಲ್ಲಿ ಸ್ಥಳೀಯ ನಗರಪಾಲಿಕೆಗಳು, ನಗರಾಭಿವೃದ್ಧಿ ಪ್ರಾಧಿಕಾರಿಗಳು, ಕಂದಾಯ ಅಧಿಕಾರಿಗಳು ಪೊಲೀಸ್ ಅಧಿಕಾರಿಗಳು, ಪ್ರವಾಸೋದ್ಯಮ ಅಧಿಕಾರಿಗಳ ಮೂಲಕವೇ ಕಾರ್ಯ ನಿರ್ವಹಿಸಬೇಕಾಗುತ್ತದೆ. ಇದರಿಂದ ನಗರಾಭಿವೃದ್ಧಿ ಇಲಾಖೆ, ಕಂದಾಯ ಇಲಾಖೆ, ಪೊಲೀಸ್ ಇಲಾಖೆ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಪ್ರವಾಸೋದ್ಯಮ ಇಲಾಖೆ ಹಾಗೂ ಇತರೇ ಇಲಾಖೆಗಳ ಮೂಲಕವೇ ಉದ್ದೇಶಿತ ಗುರಿ ಸಾಧಿಸಬೇಕಾಗುತ್ತದೆ. ಈ ಎಲ್ಲ ಇಲಾಖೆಗಳ ಕಾರ್ಯದರ್ಶಿಗಳು ಮತ್ತು ಮುಖ್ಯಸ್ಥರೊಂದಿಗೆ ಸಮನ್ವಯ ಸಾಧಿಸಲು ಕೇಂದ್ರಸ್ಥಾನ ಬೆಂಗಳೂರಿನಲ್ಲಿ ಇರುವುದು ಅಗತ್ಯವಾಗಿದೆ.

ಆ) ಮೊದಲು ಮೈಸೂರು ಶ್ರೀರಂಗಪಟ್ಟಣ ಪ್ರದೇಶವನ್ನು ಪರಂಪರೆ ಕ್ಷೇತ್ರವನ್ನಾಗಿ ಅಭಿವೃದ್ಧಿಪಡಿಸಲು ಯೋಜಿಸಲಾಗಿತ್ತು. ತದನಂತರ ಇತರೆ ಪ್ರದೇಶಗಳಾದ ಬಿಜಾಪುರ, ಗುಲ್ಬರ್ಗಾ, ಬೀದರ್, ಕಿತ್ತೂರು ಮುಂತಾದ ಸ್ಥಳಗಳನ್ನು ಸೇರಿಸಿ ರಾಜ್ಯವ್ಯಾಪಿ ಕಾರ್ಯಕ್ಷೇತ್ರ ನೀಡಲಾಗಿದೆ. ಆದ್ದರಿಂದ ಬೆಂಗಳೂರಿನಲ್ಲಿ ಕೇಂದ್ರಸ್ಥಾನ ಮಾಡುವುದು ಸೂಕ್ತ.

ಇ) ಬಿಜಾಪುರ, ಗುಲ್ಬರ್ಗಾ, ಬೀದರ್ ಗಳಿಗೆ ಪ್ರವಾಸ ಹೋಗಲು ಮೈಸೂರಿನಿಂದ ಬೆಂಗಳೂರಿನ ಮೂಲಕವೇ ಹೋಗಬೇಕಾಗುತ್ತದೆ. ಪ್ರವಾಸದ ದೃಷ್ಟಿಯಿಂದ ಬೆಂಗಳೂರು ಸೂಕ್ತವಾಗಿದೆ.

ಈ) ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯ ನಿರ್ದೇಶನಾಲಯವು ಹೊಸಪೇಟೆಯಲ್ಲಿ ಇರುವುದರಿಂದ ಅಲ್ಲಿಗೆ ಪ್ರವಾಸ ಹೋಗಿ ಬರಲು ಬೆಂಗಳೂರು ಕೇಂದ್ರ ಸ್ಥಾನ ಸೂಕ್ತವಾಗಿದೆ.

ಉ) ಮೈಸೂರು ಶ್ರೀರಂಗಪಟ್ಟಣ ಪರಂಪರೆ ಕ್ಷೇತ್ರದ ಕೆಲಸಕ್ಕಾಗಿ ಬೆಂಗಳೂರಿನಿಂದ ವಾರದಲ್ಲಿ ಒಂದೆರಡು ದಿನ ಹೋಗಿ ಬರಲು ತೊಂದರೆ ಆಗುವುದಿಲ್ಲ.

ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ಪರಂಪರೆ ಆಯುಕ್ತರ (ಪರವಾಗಿ) ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಇವರು ಮೈಸೂರಿನಲ್ಲಿ ಉಪನಿರ್ದೇಶಕರ ಕಛೇರಿಯನ್ನು ಕೆಲವು ಸಿಬ್ಬಂದಿ ಸಮೇತ ಮುಂದುವರಿಸುವಂತೆ ಕೋರಿರುತ್ತಾರೆ.

ಈ ಮುಂದುವರಿಕೆಗೆ ಸಮರ್ಥನೆಯಾಗಿ ಈ ಕೆಳಕಂಡ ವಿಷಯಗಳನ್ನು ಸರ್ಕಾರದ ಮುಂದೆ ಇಟ್ಟಿರುತ್ತಾರೆ.

1. ಪರಂಪರೆ ಪ್ರದೇಶ ಮತ್ತು ಕಟ್ಟಡಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿರುವುದು.
2. ಮೈಸೂರು ಶ್ರೀರಂಗಪಟ್ಟಣ ಪರಂಪರೆ ಪ್ರದೇಶಗಳ ಸಂರಕ್ಷಣೆ ಮತ್ತು ಅಭಿವೃದ್ಧಿ ಕುರಿತಂತೆ ಪಾರಂಪರಿಕ ಸಂರಕ್ಷಣೆಗೆ ತಜ್ಞ ಸಮಿತಿಯನ್ನು ಸರ್ಕಾರವು ರಚಿಸಿದ್ದು, ಸಮಿತಿಯು ಪರಂಪರೆ ಅಭಿವೃದ್ಧಿ ಕುರಿತಂತೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ತಜ್ಞರ ಸಲಹೆಯೊಂದಿಗೆ ಕಾರ್ಯಪ್ರವೃತ್ತವಾಗಿರುವುದು.
3. ದಸರಾ 2004ರ ಸಂದರ್ಭದಲ್ಲಿ ಮೈಸೂರಿನಲ್ಲಿ ಪರಂಪರೆ ಪ್ರಚಾರಣೆ, ಪರಂಪರೆ ಸ್ವಚ್ಛತಾ ಕಾರ್ಯಕ್ರಮಗಳು ಪರಂಪರೆ ಕಾಲ್ನಡಿಗೆ ಮುಂತಾದವುಗಳ ಮುಖೇನ ಪರಂಪರೆ ಬಗ್ಗೆ ಜಾಗೃತಿ ಮೂಡಿಸುವಲ್ಲಿ ಇಲಾಖೆಯ ಸಹಕಾರ ಅಗತ್ಯವಾಗಿರುವುದು.

ಈ ಕೆಳಕಂಡ ಹುದ್ದೆಗಳ ಸಮೇತ ಉಪನಿರ್ದೇಶಕರ ಕಛೇರಿಯನ್ನು ಮೈಸೂರಿನಲ್ಲಿಯೇ ಮುಂದುವರಿಸಲು ಸರ್ಕಾರ ನಿರ್ಧರಿಸಿದೆ.

1) ಪ್ರಥಮ ದರ್ಜೆ ಸಹಾಯಕರು - ಒಂದು ಹುದ್ದೆ
2) ಶೀಘ್ರಲಿಪಿಗಾರರು - ಒಂದು ಹುದ್ದೆ
3) ಗ್ರೂಪ್-ಡಿ ನೌಕರರು - ಒಂದು ಹುದ್ದೆ

ಮುಂದುವರೆದು, ಪರಂಪರೆ ಆಯುಕ್ತರ ಕಾರ್ಯವ್ಯಾಪ್ತಿಯ ದೃಷ್ಟಿಯಿಂದ ಹಾಗೂ ಅವರ ಕಾರ್ಯನಿರ್ವಹಣೆಗೆ ಪರಿಣಾಮಕಾರಿಯಾಗಲು ಆಯುಕ್ತರ ಕಛೇರಿಯ ಕೇಂದ್ರಸ್ಥಾನವನ್ನು ಬೆಂಗಳೂರಿಗೆ ವರ್ಗಾಯಿಸಲು ಸರ್ಕಾರವು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 43 ಕೆಎಂಯು 2005, ಬೆಂಗಳೂರು, ದಿನಾಂಕ: 30ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧೀನಕ್ಕೆ ಬರುವ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು, ಈ ಕಛೇರಿಯ ಉಪನಿರ್ದೇಶಕರು ಮತ್ತು ಈ ಹುದ್ದೆಗೆ ಹೊಂದಿಕೊಂಡಂತಿರುವ ಈ ಕೆಳಕಂಡ ಹುದ್ದೆಗಳೊಂದಿಗೆ ಉಪನಿರ್ದೇಶಕರ ಕಛೇರಿಯನ್ನು ಮೈಸೂರಿನಲ್ಲಿಯೇ ಮುಂದುವರಿಸಿ ಆದೇಶಿಸಿದೆ.

1) ಪ್ರಥಮ ದರ್ಜೆ ಸಹಾಯಕರು - ಒಂದು ಹುದ್ದೆ
2) ಶೀಘ್ರಲಿಪಿಗಾರರು - ಒಂದು ಹುದ್ದೆ
3) ಗ್ರೂಪ್-ಡಿ ನೌಕರರು - ಒಂದು ಹುದ್ದೆ

ಮುಂದುವರೆದು, ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಮೈಸೂರು ಈ ಕಛೇರಿಯನ್ನು ಇತರ ಸಿಬ್ಬಂದಿ ಸಮೇತ ಆಡಳಿತಾತ್ಮಕ ಹಿತದೃಷ್ಟಿಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಮೈಸೂರಿನಿಂದ ಬೆಂಗಳೂರಿಗೆ ಸ್ಥಳಾಂತರಿಸಲು ಹಾಗೂ ತಾತ್ಕಾಲಿಕವಾಗಿ ಇದನ್ನು ಕಸ್ತೂರ ಬಾ ರಸ್ತೆಯಲ್ಲಿರುವ ಸರ್ಕಾರಿ ವಸ್ತು ಸಂಗ್ರಹಾಲಯದಲ್ಲಿ ಕಾರ್ಯನಿರ್ವಹಿಸಲು ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.7.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 772

**ಎಸ್. ವಿಶಾಲಾಕ್ಷಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ:** ಹಾವೇರಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಸಿಮೆಂಟ್ ಸಾಗಾಣಿಕೆಯಲ್ಲಿ ಅವ್ಯವಹಾರ ಆಗಿರುವ ಬಗ್ಗೆ ಇಲಾಖಾ ವಿಚಾರಣೆ ಬಗ್ಗೆ - ಆದೇಶ.

**ಓದಲಾಗಿದೆ:**

1. ಆದೇಶ ಸಂಖ್ಯೆ: ಗ್ರಾಅಪ 187 ಇಎನ್‌ಕ್ಯೂ 95, ದಿ. 23.7.2002.
2. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರ ಪತ್ರ ಸಂ. ಧಾಜಿಪಂ:ಉಕಾ:ಸಿ-7: ಸಿಆರ್-184:02-03, ದಿ.4.1.2003.
3. ಆದೇಶ ಸಂಖ್ಯೆ. ಗ್ರಾಅಪ 187 ಇಎನ್‌ಕ್ಯೂ 95, ದಿ. 26.3.2003.
4. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರ ಪತ್ರ ಸಂ. ಧಾಜಿಪಂ:ಉಕಾ:ಸಿ-7: ಸಿಆರ್-184:02-03:9, ದಿ.30.3.2005.
5. ಸರ್ಕಾರದ ಸುತ್ತೋಲೆ ಸಂಖ್ಯೆ.ಸಿಆಸುಇ:10:ಸೇಇವಿ:2003, ದಿ:12.11.2003.

**ಪ್ರಸ್ತಾವನೆ:**

ಹಾವೇರಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಸಿಮೆಂಟ್ ಸಾಗಾಣಿಕೆಯಲ್ಲಿನ ಅವ್ಯವಹಾರಕ್ಕೆ ಸಂಬಂಧಿಸಿದಂತೆ ಶ್ರೀ ವಿ.ಎಲ್. ಮಾಳದಕರ, ಅಂದಿನ ಕಾರ್ಯಪಾಲಕ ಇಂಜಿನಿಯರ್, ಜಿ.ಪಂ.ಇಂ.ವಿಭಾಗ, ಹಾವೇರಿ ಇವರು ದಿ:31.10.94 ರಂದು ಸೇವೆಯಿಂದ ನಿವೃತ್ತಿ ಹೊಂದಿದ್ದರಿಂದ ಹಾಗೂ ಈ ಪ್ರಕರಣವು 92-93ನೇ ಸಾಲಿಗೆ ಸಂಬಂಧಿಸಿದ್ದರಿಂದ, ಅವರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ವಸೂಲ್ಮಾಡಲು ಸಿವಿಲ್ ಮೊಕದ್ದಮೆ ಹೂಡಲು ಹಾಗೂ ಈ ಪ್ರಕರಣದಲ್ಲಿ ಒಳಗೊಂಡಿದ್ದಾರೆನ್ನಲಾದ ಇನ್ನಿತರ ನೌಕರರುಗಳ ಪೈಕಿ ಶಿಸ್ತು ಕ್ರಮ ಕೈಗೊಳ್ಳಲು ನಿವೃತ್ತಿ ಹೊಂದಿರುವ ಶ್ರೀ ಹೆಚ್.ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ, ಜಿ.ಪಂ.ಇಂ. ವಿಭಾಗ, ಹಾವೇರಿ ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವೆ ನಿಯಮಾವಳಿಗಳ ನಿಯಮ 214 ರಡಿ ಹಾಗೂ ಸೇವೆಯಲ್ಲಿದ್ದ ಶ್ರೀ ಸಿ.ಪಿ. ಚಿದಾನಂದಪ್ಪ, ಅಂದಿನ ಲೆಕ್ಕ ಅಧೀಕ್ಷಕರು, ಜಿ.ಪಂ.ಇಂ. ವಿಭಾಗ, ಹಾವೇರಿ ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ಸಿಸಿಎ) ನಿಯಮಾವಳಿಗಳ ನಿಯಮ 11 ರನ್ವಯ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮ ಸಂ. (1)ರ ಆದೇಶದಲ್ಲಿ ನೇಮಿಸಲಾಗಿತ್ತು.

ಪ್ರಕರಣದಲ್ಲಿನ ಆಪಾದಿತರಲ್ಲಿ ಒಬ್ಬರಾದ ಶ್ರೀ ಸಿ.ಪಿ. ಚಿದಾನಂದಪ್ಪ, ಅಂದಿನ ಲೆಕ್ಕ ಅಧೀಕ್ಷಕ ಇವರು ದಿ: 30.8.1996 ರಂದು ನಿಧನರಾಗಿರುವುದರಿಂದ ಸದರಿಯವರ ಮೇಲಿನ ವಿಚಾರಣೆಯನ್ನು ನಡೆಸುವುದರ ಬಗ್ಗೆ ಸ್ಪಷ್ಟೀಕರಣ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ. (2)ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರು ಕೋರಿದ್ದರಿಂದ, ಶ್ರೀ ಸಿ.ಪಿ. ಚಿದಾನಂದಪ್ಪ, ಅಂದಿನ ಲೆಕ್ಕ ಅಧೀಕ್ಷಕರು, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಇವರ ವಿರುದ್ಧ ನಡೆಸಲು ಆದೇಶಿಸಿದ ಜಂಟಿ ಇಲಾಖಾ ವಿಚಾರಣೆಯನ್ನು ಕೈಬಿಟ್ಟು, ಅವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟವನ್ನು ಮೃತರ ವಾರಸುದಾರರಿಂದ ವಸೂಲಿ ಮಾಡಲು ಮೇಲೆ ಓದಲಾದ ಕ್ರಮ ಸಂ. (3)ರ ಆದೇಶದಲ್ಲಿ ವಿಚಾರಣಾಧಿಕಾರಿಗಳಿಗೆ ತಿಳಿಸಲಾಗಿತ್ತು. ಪ್ರಕರಣದಲ್ಲಿನ ಆಪಾದಿತರಲ್ಲಿ ಮತ್ತೊಬ್ಬ ನೌಕರರಾದ ಶ್ರೀ ಹೆಚ್.ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ (ನಿ) ಇವರು ದಿ: 29.1.2005 ರಂದು ನಿಧನರಾಗಿರುವುದರಿಂದ ಸದರಿಯವರ ವಿರುದ್ಧ ಜರುಗಿಸಲಾಗುತ್ತಿರುವ ಇಲಾಖಾ ವಿಚಾರಣೆಯನ್ನು ಕೈಬಿಡುವ ಬಗ್ಗೆ ಸರ್ಕಾರದ ನಿರ್ದೇಶನವನ್ನು ನೀಡುವಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ಧಾರವಾಡ ಇವರು ಮೇಲೆ ಓದಲಾದ ಕ್ರಮ ಸಂ.(4) ರ ಪತ್ರದಲ್ಲಿ ಕೋರಿರುತ್ತಾರೆ.

ಆದ್ದರಿಂದ, ಸರ್ಕಾರವು ಪರಿಶೀಲಿಸಿ ಈ ಪ್ರಕರಣದಲ್ಲಿ ಮೃತರಾಗಿರುವ ಮತ್ತೊಬ್ಬ ಆಪಾದಿತರಾದ ಶ್ರೀ ಹೆಚ್.ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ, ಹಾವೇರಿ ಇವರ ಮೇಲೆ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿರುವ ಆದೇಶವನ್ನು ಕೈಬಿಟ್ಟು, ನಿಧನ ಹೊಂದಿದ ಆಪಾದಿತರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ಮೃತರ ವಾರಸುದಾರರಿಂದ ವಸೂಲು ಮಾಡಲು ಉಲ್ಲೇಖ (5)ರ ಸುತ್ತೋಲೆಯನ್ವಯ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 187 ಇಎನ್‌ಕ್ಯೂ 95, ಬೆಂಗಳೂರು, ದಿನಾಂಕ: 18ನೇ ಮೇ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ನಿಧನ ಹೊಂದಿರುವ ಶ್ರೀ ಹೆಚ್.ಆರ್. ಚನ್ನಗಿರಿ, ಅಂದಿನ ಉಗ್ರಾಣಪಾಲಕ (ನಿವೃತ್ತ), ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಹಾವೇರಿ ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವೆ ನಿಯಮಾವಳಿಗಳ ನಿಯಮ 214ರ ರೀತ್ಯ ನಡೆಸಲು ಆದೇಶಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಟ್ಟು, ಅವರಿಂದ ಸರ್ಕಾರಕ್ಕೆ ಉಂಟಾಗಿರುವ ಆರ್ಥಿಕ ನಷ್ಟವನ್ನು ಅವರಿಗೆ ಸಲ್ಲಬೇಕಾದ ನಿವೃತ್ತಿ ಸೌಲಭ್ಯಗಳಿಂದ ವಸೂಲಿ ಮಾಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 773

ಎಸ್.ಸಿ.ಸುಂದರ

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇ ಲಾಖೆ.

**ವಿಷಯ:** ಗ್ರಾಮೀಣಾಭಿವೃದ್ಧಿ ಇ ಂಜಿನಿಯರಿಂಗ್ ಇ ಲಾಖೆ (RDED)ಯನ್ನು `` ಪಂಚಾಯತ್ ರಾಜ್ ಇ ಂಜಿನಿಯರಿಂಗ್ ಇ ಲಾಖೆ (PRED) '' ಎಂದು ಜಿಲ್ಲಾ ಪಂಚಾಯತ್ ಇ ಂಜಿನಿಯರಿಂಗ್ ವಿಭಾಗ (ZPED) ಮತ್ತು ಉಪ ವಿಭಾಗಗಳನ್ನು "ಪಂಚಾಯತ್ ರಾಜ್ ಇ ಂಜಿನೀಯರಿಂಗ್ ವಿಭಾಗ (PRED) ಮತ್ತು ಉಪವಿಭಾಗ" ಗಳೆಂದು ನಾಮಕರಣ ಮಾಡುವುದು ಮತ್ತು ತಾಲ್ಲೂಕು ಪಂಚಾಯತಿ ಇ ಂಜಿನಿಯರ್‌ಗಳನ್ನು ಪಂಚಾಯತ್ ರಾಜ್ ಇ ಂಜಿನಿಯರಿಂಗ್ ಉಪ ವಿಭಾಗ / ವಿಭಾಗದ ವ್ಯಾಪ್ತಿಗೆ ತಂದು ಗ್ರಾಮ ಪಂಚಾಯತಿ ಹಂಚಿಕೆ ಮಾಡುವ ಬಗ್ಗೆ - ಆದೇಶ.

**ಓದಲಾಗಿದೆ:** ಆದೇಶ ಸಂ:ಗ್ರಾಅಪ 367 ಜಿಪಸ 2002 ದಿ:18-8-2003.

**ಪ್ರಸ್ತಾವನೆ:**

ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಅನುಸೂಚಿ I,II,IIIರಲ್ಲಿ ಕ್ರಮವಾಗಿ ಗ್ರಾಮ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗಳಿಗೆ ರಸ್ತೆ ಮತ್ತು ಸೇತುವೆ, ಕುಡಿಯುವ ನೀರು ಪೂರೈಕೆ ಮತ್ತು ನೈರ್ಮಲ್ಯ,ಸಣ್ಣ ನೀರಾವರಿ ಮತ್ತು ಕಟ್ಟಡಗಳ ಇ ತ್ಯಾದಿ ವಿಷಯಗಳನ್ನು ಹಂಚಿಕೆ ಮಾಡಲಾಗಿದೆ. ಪಂಚಾಯತ್ ರಾಜ್ ಸಂಸ್ಥೆಗಳು ಹೆಚ್ಚು ಸ್ವತಂತ್ರವಾಗಿ ಕಾರ್ಯನಿರ್ವಹಿಸಲು ಅನುವಾಗುವಂತೆ ಈ ಚಟುವಟಿಕೆಗಳನ್ನು ವಿಂಗಡಿಸಿ, ಯಾವ ಕಾರ್ಯವನ್ನು ಯಾವ ಹಂತದಲ್ಲಿ ಕೈಗೊಳ್ಳಬೇಕೋ ಆ ಹಂತದಲ್ಲೇ ಕೈಗೊಳ್ಳುವಂತೆ ಮಾಡಲು ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 367 ಜಿಪಸ 2002 ದಿನಾಂಕ 18-8-2003ರಲ್ಲಿ ಚಟುವಟಿಕೆ ನಕ್ಷೆಯನ್ನು ನೀಡಲಾಗಿದೆ. ಈ ಮೊದಲು ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿ ಹೆಚ್ಚು ಚಟುವಟಿಕೆಗಳು ಬರುತ್ತಿದ್ದವು. ಚಟುವಟಿಕೆ ನಕ್ಷೆಯನ್ನು ಜಾರಿಗೆ ತಂದ ನಂತರ ಈ ಕಾರ್ಯಗಳನ್ನು ವಿಂಗಡಿಸಿ ತಾಲ್ಲೂಕು ಪಂಚಾಯತಿ ಹಾಗೂ ಗ್ರಾಮ ಪಂಚಾಯತಿಗಳಿಗೂ ವಹಿಸಲಾಗಿದೆ.

ಜಿಲ್ಲಾ ಪಂಚಾಯತಿ ಇ ಂಜಿನಿಯರಿಂಗ್ ವಿಭಾಗ, ಉಪ ವಿಭಾಗಗಳು ಮತ್ತು ತಾಲ್ಲೂಕು ಪಂಚಾಯ್ತಿಗಳು ರಸ್ತೆ ಮತ್ತು ಸೇತುವೆ, ಕುಡಿಯುವ ನೀರು ಪೂರೈಕೆ ಮತ್ತು ನೈರ್ಮಲ್ಯ, ಸಣ್ಣ ನೀರಾವರಿ ಮತ್ತು ಕಟ್ಟಡಗಳು, ವಲಯಗಳ ತಾಂತ್ರಿಕ ವಿಷಯಗಳನ್ನು ನಿರ್ವಹಿಸುತ್ತಿದ್ದು, ಇ ದಕ್ಕಾಗಿ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಹಾಗೂ ಶಾಖಾ ಮಟ್ಟದಲ್ಲಿ ಕ್ರಮವಾಗಿ ಜಿಲ್ಲಾ ಪಂಚಾಯತಿ ಇ ಂಜಿನಿಯರಿಂಗ್ ವಿಭಾಗ ಮತ್ತು ಉಪ ವಿಭಾಗಗಳು ಮತ್ತು ಶಾಖಾಧಿಕಾರಿಗಳು ಇ ರುತ್ತಾರೆ. ಈಗ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳನ್ನು ವಿವಿಧ ಹಂತದ ಪಂಚಾಯತ್ ರಾಜ್ ಸಂಸ್ಥೆಗಳಿಗೆ ವರ್ಗಾಯಿಸಿರುವುದರಿಂದ ಇ ದೇ ಸಿಬ್ಬಂದಿ ಎಲ್ಲಾ ಪಂಚಾಯತ್ ರಾಜ್ ಸಂಸ್ಥೆಗಳೂ ಅನುಷ್ಠಾನಗೊಳಿಸುವ ಮೇಲೆ ತಿಳಿಸಿದ ವಲಯಗಳ ತಾಂತ್ರಿಕ ವಿಷಯಗಳನ್ನು ನಿರ್ವಹಿಸಬೇಕಾಗುತ್ತದೆ.

ತಾಲ್ಲೂಕು ಪಂಚಾಯತಿಯಲ್ಲಿ ಫಲಾನುಭವಿ ಆಧಾರದ ಹಾಗೂ ಕೆಲವು ಉದ್ಯೋಗ ಸೃಜನೆ ಕಾಮಗಾರಿಗಳನ್ನು ನಿರ್ವಹಿಸುವ ಸಲುವಾಗಿ ಇದುವರೆಗೂ ತಾಂತ್ರಿಕ ಸಿಬ್ಬಂದಿಯನ್ನು ಒದಗಿಸಲಾಗಿದೆ. ಈಗ ಗ್ರಾಮ ಪಂಚಾಯತಿಗಳಿಗೆ ಹೆಚ್ಚಿನ ಕಾರ್ಯಕ್ರಮಗಳು ವರ್ಗಾವಣೆಯಾಗಿರುವುದರಿಂದ ತಾಲ್ಲೂಕು ಪಂಚಾಯತಿಯಲ್ಲಿರುವ ತಾಂತ್ರಿಕ ಸಿಬ್ಬಂದಿಯನ್ನು ಈಗಿರುವ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗಗಳ ಅಧೀನಕ್ಕೆ ಒಳಪಡಿಸಿ ಇವರುಗಳೊಂದಿಗೆ ಉಪವಿಭಾಗದ ಸಹಾಯಕ : ಕಿರಿಯ ಇಂಜಿನಿಯರುಗಳನ್ನು ಗ್ರಾಮ ಪಂಚಾಯತಿವಾರು ವಿಂಗಡಣೆ ಮಾಡುವ ಅಗತ್ಯತೆಯನ್ನು ಸರ್ಕಾರವು ಮನಗಂಡಿದೆ. ಇದರಿಂದ ಈ ಶಾಖಾಧಿಕಾರಿಗಳಿಗೆ ವಹಿಸಿದ ಗ್ರಾಮ ಪಂಚಾಯತಿಗಳ ವ್ಯಾಪ್ತಿಯಲ್ಲಿ ಬರುವ ಜಿಲ್ಲಾ ಪಂಚಾಯತಿ, ತಾಲ್ಲೂಕು ಪಂಚಾಯತಿ ಮತ್ತು ಗ್ರಾಮ ಪಂಚಾಯತಿಯ ಎಲ್ಲಾ ತಾಂತ್ರಿಕ ವಿಷಯಗಳನ್ನು ಅವರು ನಿರ್ವಹಿಸಲು ಸಾಧ್ಯವಾಗುತ್ತದೆ ಹಾಗೂ ಪಂಚಾಯತ್ ರಾಜ್ ಸಂಸ್ಥೆಗಳಿಗೆ ಅಗತ್ಯವಿರುವ ತಾಂತ್ರಿಕ ಸೇವೆಯನ್ನು ಸರಳೀಕರಣಗೊಳಿಸಿದಂತಾಗಿರುತ್ತದೆ. ಹಾಲಿ ಇರುವ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಮತ್ತು ಉಪ ವಿಭಾಗಗಳೇ ಇಡೀ ಪಂಚಾಯತ್ ರಾಜ್ ವ್ಯವಸ್ಥೆಯ ತಾಂತ್ರಿಕ ಕಾರ್ಯಕ್ರಮಗಳನ್ನು ನಿರ್ವಹಿಸುವುದರಿಂದ, ಅವುಗಳನ್ನು "ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಮತ್ತು ಉಪ ವಿಭಾಗ" ಎಂಬ ನಾಮಾಂಕಿತಕ್ಕೆ ಬದಲಾಗಿ, "ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ ಮತ್ತು ಉಪವಿಭಾಗ" ಗಳೆಂದೂ ರಾಜ್ಯ ಮಟ್ಟದಲ್ಲಿ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆಯನ್ನು (RDED) ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ (PRED) ಎಂದು ಪುನರ್ ನಾಮಕರಣ ಮಾಡಲೂ ಸಹ ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ : ಗ್ರಾಅಪ 100 ಜಿಪಅ 05, ಬೆಂಗಳೂರು ದಿ:1ನೇ ಜೂನ್ 2005**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಗ್ರಾಮೀಣಾಭಿವೃದ್ಧಿ ಇಂಜಿನಿಯರಿಂಗ್ ಇಲಾಖೆ (RDED)ಯನ್ನು ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ (PRED)" ಎಂದೂ, ಎಲ್ಲಾ "ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಮತ್ತು ಉಪ ವಿಭಾಗ" ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ "ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ : ಉಪ ವಿಭಾಗ "ಗಳೆಂದು ಪುನರ್ ನಾಮಕರಣ ಮಾಡಿ ಸರ್ಕಾರವು ಆದೇಶಿಸಿದೆ. ಈ ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ : ಉಪ ವಿಭಾಗಗಳು ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್‌ಗಳಿಗೆ ತಾಂತ್ರಿಕ ಸಲಹೆ, ಮಾರ್ಗದರ್ಶನ, ಸಹಕಾರ ಮತ್ತು ಬೆಂಬಲ ನೀಡುವುದರ ಜೊತೆಗೆ ಈ ಸಂಸ್ಥೆಗಳು ಅವುಗಳಿಗೆ ವಹಿಸಿದ ಕಾಮಗಾರಿಗಳನ್ನು ಅನುಷ್ಠಾನ ಮಾಡತಕ್ಕದ್ದು.

ಪುನರ್ ನಾಮಕರಣಗೊಂಡ ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗದಲ್ಲಿ ಹಾಗೂ ತಾಲ್ಲೂಕು ಪಂಚಾಯತಿಯಲ್ಲಿನ ಎಲ್ಲಾ ಸಹಾಯಕ ಇಂಜಿನಿಯರ್/ ಕಿರಿಯ ಇಂಜಿನಿಯರ್‌ಗಳಿಗೆ ಆಯಾ ತಾಲ್ಲೂಕಿನಲ್ಲಿ ಬರುವ ಗ್ರಾಮ ಪಂಚಾಯತ್‌ಗಳನ್ನು ಹಂಚಿಕೆ ಮಾಡಬೇಕು. ಹೀಗೆ ಮಾಡುವಾಗ ಸಾಧ್ಯವಾದಷ್ಟು ಮಟ್ಟಿಗೆ ಒಂದು ಜಿಲ್ಲಾ ಪಂಚಾಯತಿ ವ್ಯಾಪ್ತಿಗೆ ಬರುವ ಗ್ರಾಮ ಪಂಚಾಯತಿಗಳನ್ನು ಒಬ್ಬ ಸಹಾಯಕ/ ಕಿರಿಯ ಇಂಜಿನಿಯರ್‌ಗೆ ಹಂಚಬೇಕು. ಜೊತೆಗೆ ಸಾಧ್ಯವಾದಷ್ಟು ಮಟ್ಟಿಗೆ ಸದರಿ ಗ್ರಾಮ ಪಂಚಾಯತಿಗಳಲ್ಲಿ ಕೇಂದ್ರ ಭಾಗದ ಗ್ರಾಮ ಪಂಚಾಯತಿಗಳನ್ನು ಗುರುತಿಸಿ ಅವುಗಳನ್ನು ಶಾಖಾಧಿಕಾರಿಗಳ ಕೇಂದ್ರಸ್ಥಾನವನ್ನಾಗಿ ಮಾಡತಕ್ಕದ್ದು. ಹಾಗೆ ಮಾಡುವಾಗ ಆದಷ್ಟು ಮಟ್ಟಿಗೆ ಜಿಲ್ಲಾ ಪಂಚಾಯತ್ ಕ್ಷೇತ್ರ ಅಥವಾ ತಾಲ್ಲೂಕು ಪಂಚಾಯತ್ ಕ್ಷೇತ್ರಗಳನ್ನು ಶಾಖಾಧಿಕಾರಿಗಳ ಕೇಂದ್ರಸ್ಥಾನಗಳನ್ನಾಗಿ ಮಾಡತಕ್ಕದ್ದು.

ಶಾಖಾಧಿಕಾರಿಗಳಿಗೆ ಗ್ರಾಮ ಪಂಚಾಯತ್‌ಗಳನ್ನು ಹಂಚಿಕೆ ಮಾಡಿ ಕೇಂದ್ರ ಭಾಗದ ಗ್ರಾಮ ಪಂಚಾಯತ್‌ಗಳನ್ನು ಶಾಖಾಧಿಕಾರಿಗಳ ಕೇಂದ್ರಸ್ಥಾನವೆಂದು ಗುರ್ತಿಸಿದ ನಂತರ ಸದರಿ ಗ್ರಾಮ ಪಂಚಾಯತಿಯಲ್ಲಿ ಸಹಾಯಕ ಇಂಜಿನಿಯರ್ : ಕಿರಿಯ ಇಂಜಿನಿಯರ್‌ಗಳ ಕಛೇರಿಯನ್ನು ತೆರೆಯತಕ್ಕದ್ದು.

ಸಹಾಯಕ ಇಂಜಿನಿಯರ್ : ಕಿರಿಯ ಇಂಜಿನಿಯರ್‌ಗಳು ಅವರಿಗೆ ವಹಿಸಿದ ಗ್ರಾಮ ಪಂಚಾಯತಿಗಳ ವ್ಯಾಪ್ತಿಯಲ್ಲಿ ಬರುವ ಮೂರು ಹಂತದ ಪಂಚಾಯತ್ ರಾಜ್ ಸಂಸ್ಥೆಗಳ ಎಲ್ಲಾ ಕಾಮಗಾರಿಗಳನ್ನು ನಿರ್ವಹಿಸತಕ್ಕದ್ದು ಮತ್ತು ಅವುಗಳ ಜವಾಬ್ದಾರಿಯನ್ನು ಹೊರತಕ್ಕದ್ದು.

ಮುಂದಿನ ಆದೇಶವನ್ನು ಹೊರಡಿಸುವವರೆಗೆ ಮೇಲಿನ ವ್ಯವಸ್ಥೆಯಡಿ ಬರುವ ತಾಲ್ಲೂಕು ಪಂಚಾಯತಿಗಳ ಎಲ್ಲ ಸಹಾಯಕ ಇಂಜಿನಿಯರ್ : ಕಿರಿಯ ಇಂಜಿನಿಯರ್‌ಗಳು ತಮ್ಮ ಸಂಬಳವನ್ನು ಸಂಬಂಧಪಟ್ಟ ತಾಲ್ಲೂಕು ಪಂಚಾಯತಿಯಲ್ಲಿ ಪಡೆಯುವುದು ಹಾಗೂ ಆಯಾ ತಾಲ್ಲೂಕಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಇವರ ಅಧೀನದಲ್ಲಿ ಕೆಲಸ ನಿರ್ವಹಿಸತಕ್ಕದ್ದು. ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಪಂಚಾಯತ್ ರಾಜ್ ಇಂಜಿನಿಯರಿಂಗ್ ಉಪ ವಿಭಾಗ, ಇವರು ಆಯಾ ತಾಲ್ಲೂಕು ಪಂಚಾಯತಿಗಳಿಗೆ ಸಂಪೂರ್ಣ ತಾಂತ್ರಿಕ ಬೆಂಬಲ ನೀಡತಕ್ಕದ್ದು.

ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ : ಉಪ ವಿಭಾಗಗಳಲ್ಲಿ ಮತ್ತು ತಾಲ್ಲೂಕು ಪಂಚಾಯತಿಗಳಲ್ಲಿ ಕೆಲಸ ನಿರ್ವಹಿಸುತ್ತಿರುವ ದಿನಗೂಲಿ ನೌಕರರನ್ನು ಸಹ ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಕೆಲಸ ಮಾಡಲು ಒದಗಿಸುವುದು.

ಮೇಲಿನಂತೆ ಕೆಲಸಕಾರ್ಯ ನಿರ್ವಹಿಸಲು ಆಯಾ ಇಂಜಿನಿಯರಿಂಗ್ ಉಪವಿಭಾಗ ಮತ್ತು ತಾಲ್ಲೂಕು ಪಂಚಾಯತ್ ಇಂಜಿನಿಯರುಗಳ ಕೇಂದ್ರಸ್ಥಾನ ಮತ್ತು ಅವರ ವ್ಯಾಪ್ತಿಗೆ ಬರುವ ಗ್ರಾಮ ಪಂಚಾಯತಿಗಳನ್ನು ಗೊತ್ತುಪಡಿಸಿ ವಿವರಗಳನ್ನು ಒಂದು ತಿಂಗಳೊಳಗಾಗಿ ಒದಗಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 774

**ಎಸ್.ಸಿ. ಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ.

## ಶಿಕ್ಷಣ ಸಚಿವಾಲಯ

**ವಿಷಯ:** 2004-2005ನೇ ಶೈಕ್ಷಣಿಕ ಸಾಲಿಗೆ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆ.

**ಓದಲಾಗಿದೆ:**

1. ದಿ:14.12.2004 ಸಂ.ಇಡಿ 329 ಯುಆರ್‌ಸಿ 2004ರ ಸರ್ಕಾರಿ ಆದೇಶ.
2. ದಿ:20.12.2004 ಸಂ.ಇಡಿ 329 ಯುಆರ್‌ಸಿ 2004ರ ಸರ್ಕಾರಿ ಪತ್ರ.
3. ದಿನಾಂಕ:20.12.2004 ಸಂ. F.SRO/NCTE/2004-05/ 9485ರ ಎನ್‌ಸಿಟಿಇಯ ಪ್ರಾದೇಶಿಕ ನಿರ್ದೇಶಕರ ಪತ್ರ.
4. ದಿ:30.12.2004 ಸಂ.ಇಡಿ 329 ಯುಆರ್‌ಸಿ 2004ರ ಸರ್ಕಾರಿ ಆದೇಶ.

5. ದಿನಾಂಕ:08.02.2005 ಸಂ. F.SRO/NCTE/B.Ed/2004-05/ 526ರ ಎನ್‌ಸಿಟಿಇಯ ಪ್ರಾದೇಶಿಕ ನಿರ್ದೇಶಕರ ಪತ್ರ.
6. ದಿನಾಂಕ:15.02.2005 ಸಂ. F.SRO/NCTE/2004-05/ 624ರ ಎನ್‌ಸಿಟಿಇಯ ಪ್ರಾದೇಶಿಕ ನಿರ್ದೇಶಕರ ಪತ್ರ.
7. ಸರ್ಕಾರದ ಪತ್ರ ಸಂ. ಇಡಿ 108 ಯುಆರ್‌ಸಿ 2005 ದಿನಾಂಕ: 10.5.2005.

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್‌ಸಿಟಿಇ ಅಧಿನಿಯಮ 1993ರ 14ನೇ ಪ್ರಕರಣದಡಿ ಎನ್‌ಸಿಟಿಇ ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಟಿಸಿಹೆಚ್ ಮತ್ತು ಬಿಇಡಿ ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999ರ 2(1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಅಂತೆಯೇ, 2004-2005ನೇ ಶೈಕ್ಷಣಿಕ ಸಾಲಿನ ಬಿ.ಎಡ್ ಕೋರ್ಸಿನ ಸೀಟ್ ಮ್ಯಾಟ್ರಿಕ್ಸ್‌ನ್ನು ಪ್ರಕಟಿಸಲು ಅನುವಾಗುವಂತೆ ಎನ್‌ಸಿಟಿಇ ಮಾನ್ಯತೆ ಹೊಂದಿದ ಶಿಕ್ಷಣ ಕಾಲೇಜುಗಳ ಪಟ್ಟಿಯನ್ನು ಅನುಮೋದಿತ ವಿದ್ಯಾರ್ಥಿ ಪ್ರಮಾಣದೊಂದಿಗೆ ತಕ್ಷಣ ಒದಗಿಸುವಂತೆ ಎನ್‌ಸಿಟಿಇ-ಎಸ್.ಆರ್.ಸಿಯ ಪ್ರಾದೇಶಿಕ ನಿರ್ದೇಶಕರನ್ನು ಕೋರಲಾಗಿತ್ತು. ಇದನ್ನು ಪ್ರತಿಕ್ರಿಯಿಸಿ ದಿನಾಂಕ: 8.2.2005ರ ಪತ್ರದಲ್ಲಿ ಎನ್‌ಸಿಟಿಇಯು ಇತ್ತೀಚೆಗೆ 2004-05ನೇ ಸಾಲಿಗೆ ಹೊಸದಾಗಿ 01 (ಒಂದು) ಬಿ.ಎಡ್ ಕಾಲೇಜಿಗೆ ಮಾನ್ಯತೆ ನೀಡಿರುವ ಪಟ್ಟಿಯನ್ನು ಒದಗಿಸಿದೆ. ಈ ಹಿನ್ನೆಲೆಯಲ್ಲಿ ಸದರಿ ಕಾಲೇಜಿನ ವಿದ್ಯಾರ್ಥಿ ಪ್ರಮಾಣದ ನಿರ್ಧರಣೆಯನ್ನು ಸಂವೀಕ್ಷಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 329 ಯುಆರ್‌ಸಿ 2004, ಬೆಂಗಳೂರು, ದಿನಾಂಕ: 24ನೇ ಮೇ 2005**

3) ದಿನಾಂಕ:14.12.2004 ಸಂ. ಇಡಿ 329 ಯುಆರ್‌ಸಿ 2004, ದಿನಾಂಕ: 30.12.2004ರ ಸಂಖ್ಯೆ ಇಡಿ 329 ಯುಆರ್‌ಸಿ 2004, ದಿನಾಂಕ:25.02.2005ರ ಸಂ. ಇಡಿ 329 ಯುಆರ್‌ಸಿ 2004 (ಭಾಗ) ಹಾಗೂ ದಿನಾಂಕ:28.03.2005 ಸಂ. ಇಡಿ 329 ಯುಆರ್‌ಸಿ 2004 (ಭಾಗ-2)ರ ಸರ್ಕಾರಿ ಆದೇಶಗಳನ್ನು ಮುಂದುವರೆಸುತ್ತಾ, ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59ನೇ ಪ್ರಕರಣದ (18)ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್. ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2(1)ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರಿ/ ವಿಶ್ವವಿದ್ಯಾಲಯ/ಅನುದಾನಿತ ಮತ್ತು ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸುತ್ತಿರುವ ಬಿ.ಎಡ್ ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು 2004-2005ನೇ ಶೈಕ್ಷಣಿಕ ಸಾಲಿಗೆ ಅನುವಾಗುವಂತೆ ಈ ಕೆಳಕಂಡ 01(ಒಂದು) ಹೊಸ ಬಿ.ಎಡ್ ಕಾಲೇಜಿನ ವಿದ್ಯಾರ್ಥಿ ಪ್ರಮಾಣವನ್ನು ನಿರ್ದಿಷ್ಟಪಡಿಸಲಾಗಿದೆ. ಸದರಿ ಶಿಕ್ಷಣ ಕಾಲೇಜುಗಳಲ್ಲಿ ವಿದ್ಯಾರ್ಥಿಗಳ ಪ್ರವೇಶವು ದಿನಾಂಕ: 14.12.2004 ಸಂ. ಇಡಿ 329 ಯುಆರ್‌ಸಿ 2004, ದಿನಾಂಕ: 30.12.2004ರ ಸಂಖ್ಯೆ ಇಡಿ 329 ಯುಆರ್‌ಸಿ 2004, ದಿನಾಂಕ:25.02.2005ರ ಸಂ. ಇಡಿ 329 ಯುಆರ್‌ಸಿ 2004(ಭಾಗ) ಹಾಗೂ ದಿನಾಂಕ:28.03.2005 ಸಂ. ಇಡಿ 329 ಯುಆರ್‌ಸಿ 2004(ಭಾಗ-2)ರ ಆದೇಶಗಳಲ್ಲಿ ಸ್ಪಷ್ಟಪಡಿಸಲಾದ ಷರತ್ತುಗಳಿಗೆ ಒಳಪಟ್ಟಿರುತ್ತವೆ.

| ಕ್ರ. ಸಂ. | ಕಾಲೇಜಿನ ಹೆಸರು | ಎನ್‌ಸಿಟಿಇ ನಿಗದಿಪಡಿಸಿರುವ ಗರಿಷ್ಠ ವಿದ್ಯಾರ್ಥಿ ಪ್ರಮಾಣ | ಷರಾ |
|---|---|---|---|
| | **ಕೋಲಾರ ಜಿಲ್ಲೆ** | | |
| 1. | ಶ್ರೀ ಶಾರದಾ ಕಾಲೇಜ್ ಆಫ್ ಎಜುಕೇಷನ್, ಮುಳುಬಾಗಿಲು-563 131, ಕೋಲಾರ ಜಿಲ್ಲೆ. | 100 | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 775

**ಸುಂದರ ರಾಜ ಗುಪ್ತ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ವಿಷಯ**: ಸಾರ್ವಜನಿಕ ಶಿಕ್ಷಣ ಇಲಾಖೆ ಉತ್ತರ ಕರ್ನಾಟಕದ ಆಯುಕ್ತಾಲಯಗಳ ಹುದ್ದೆಗಳನ್ನು 01–4–2005ರಿಂದ ಮುಂದುವರಿಸುವ ಬಗ್ಗೆ.

**ಓದಲಾಗಿದೆ**:
1. ಸರ್ಕಾರಿ ಆದೇಶ ಸಂಖ್ಯೆ;ಇಡಿ 163 ಯೋಯೋಕಾ 2003, ದಿನಾಂಕ:12–10–2004(ಇಡಿ 52 ಸ್ಪೀಮರ(ಯೂನಿಕ್)2004,ದಿನಾಂಕ:12–10–2004)
2. ಸರ್ಕಾರಿ ಆದೇಶ ಸಂಖ್ಯೆ;ಇಡಿ 212 ಯೋಯೋಕಾ 2004, ದಿನಾಂಕ:06–11–2004

ಪ್ರಸ್ತಾವನೆ:

ಸಾರ್ವಜನಿಕ ಶಿಕ್ಷಣ ಇಲಾಖೆಯ ಧಾರವಾಡ ಆಯುಕ್ತಾಲಯದ ವ್ಯಾಪ್ತಿಯ 100 ಹುದ್ದೆಗಳು(89+11) ಹಾಗೂ ಗುಲ್ಬರ್ಗ ಆಯುಕ್ತಾಲಯದ ವ್ಯಾಪ್ತಿಯ 55 (48+7) ಹುದ್ದೆಗಳನ್ನು ಮೇಲೆ(1)ರಲ್ಲಿ ಓದಲಾದ ದಿನಾಂಕ:12–10–2004ರ ಸರ್ಕಾರಿ ಆದೇಶದಲ್ಲಿ 01–4–2004ರಿಂದ 31–3–2005ರವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಯಿತು. ಅನಂತರ ಬೆಂಗಳೂರು ಆಯುಕ್ತಾಲಯದಿಂದ ಈ ಎರಡೂ ಆಯುಕ್ತಾಲಯಗಳಿಗೆ ವರ್ಗಾವಣೆಯಾದ ಹುದ್ದೆಗಳ ಸಂಖ್ಯೆಯನ್ನು ಪರಾಮರ್ಶಿಸಿ ಮೇಲೆ(2)ರಲ್ಲಿ ಓದಲಾದ ದಿನಾಂಕ: 06–11–2004ರ ಸರ್ಕಾರಿ ಆದೇಶದಲ್ಲಿ ಧಾರವಾಡ ಆಯುಕ್ತಾಲಯಕ್ಕೆ 81 ಹುದ್ದೆಗಳು ಹಾಗೂ ಗುಲ್ಬರ್ಗಾ ಆಯುಕ್ತಾಲಯಕ್ಕೆ 33 ಹುದ್ದೆಗಳನ್ನು ವರ್ಗಾಯಿಸಿದ್ದಾಗಿ ನಿಗದಿಪಡಿಸಲಾಯಿತು. ಈ ಹುದ್ದೆಗಳನ್ನು 2005–06ನೇ ಸಾಲಿಗೆ ಮುಂದುವರಿಸುವ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ

**ಸರ್ಕಾರಿ ಆದೇಶ ಸಂಖ್ಯೆ: ಇಡಿ 97 ಯೋಯೋಕಾ 2005, ಬೆಂಗಳೂರು, ದಿನಾಂಕ: 23ನೇ ಮೇ 2005**
**(ಇಡಿ 05 ಸ್ಪೀಮರ (ಯೂನಿಕ್)2005, ದಿನಾಂಕ: 23ನೇ ಮೇ 2005)**

ಸರ್ಕಾರವು ಸಾರ್ವಜನಿಕ ಶಿಕ್ಷಣ ಇಲಾಖೆಯ ಧಾರವಾಡ ಹಾಗೂ ಗುಲ್ಬರ್ಗಾ ಆಯುಕ್ತಾಲಯಗಳ ವ್ಯಾಪ್ತಿಯ ಹಾಗೂ ಈ ಆದೇಶದ ಅನುಬಂಧ–1 ಮತ್ತು 2ರಲ್ಲಿ ನಮೂದಿಸಿರುವ ವಿವಿಧ ವೃಂದಗಳ ಒಟ್ಟು 132 ಹುದ್ದೆಗಳನ್ನು (ಧಾರವಾಡ 92, ಗುಲ್ಬರ್ಗಾ 40) 01–4–2005ರಿಂದ 31–3–2006ರವರೆಗೆ ತಾತ್ಕಾಲಿಕವಾಗಿ ಮುಂದುವರಿಸುತ್ತದೆ.

ಈ ಬಗೆಗಿನ ಧಾರವಾಡ ಆಯುಕ್ತಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ 2202–02–001–0–03–051 ಸಾಮಾನ್ಯದಲ್ಲೂ ಗುಲ್ಬರ್ಗಾ ಆಯುಕ್ತಾಲಯದ ವೆಚ್ಚವನ್ನು ಲೆಕ್ಕಶೀರ್ಷಿಕೆ 2202–02–001–0–05–051 ಸಾಮಾನ್ಯದಲ್ಲೂ ಭರಿಸತಕ್ಕದ್ದು.

ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರು ಅ.ಟಿ.ಸಂಖ್ಯೆ:ಇಡಿ267 ಐಎಫ್ (ಬಿಎ) 2005, ದಿ:29–3–2005 ರಲ್ಲಿ ನೀಡಿದ ಸಹಮತಿಯನ್ವಯ ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಉಪ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 97 ಯೋಯೋಕಾ 2005, ಬೆಂಗಳೂರು, ದಿನಾಂಕ: 23ನೇ ಮೇ 2005ಕ್ಕೆ ಅನುಬಂಧ-1**
**(ಇಡಿ 05 ಸ್ವೀಮರ (ಯೂನಿಕ್)2005, ದಿನಾಂಕ: 23ನೇ ಮೇ 2005**

ಧಾರವಾಡ ಮತ್ತು ಗುಲ್ಬರ್ಗಾ ಸಾರ್ವಜನಿಕ ಶಿಕ್ಷಣ ಆಯುಕ್ತಾಲಯಗಳಲ್ಲಿ ದಿನಾಂಕ: 1.4.2005 ರಿಂದ 31.3.2006 ರವರೆಗೆ ಮುಂದುವರಿಸಲ್ಪಟ್ಟ ಹುದ್ದೆಗಳ ವಿವರ

| ಕ್ರ. ಸಂ. | ವೃಂದ | ಹುದ್ದೆಗಳ ಸಂಖ್ಯೆ ಹುಬ್ಬಳ್ಳಿ ಆಯುಕ್ತರ ಕಛೇರಿ | ಗುಲ್ಬರ್ಗಾ ಆಯುಕ್ತರ ಕಛೇರಿ |
|---|---|---|---|
| 1. | ಅಪರ ಆಯುಕ್ತರು | 1 | 1 |
| 2. | ನಿರ್ದೇಶಕರು | 1 | - |
| 3. | ಸಹ ನಿರ್ದೇಶಕರು | 1 | 1 |
| 4. | ಉಪ ನಿರ್ದೇಶಕರು | 2 | 1 |
| 5. | ಮುಖ್ಯ ಲೆಕ್ಕಾಧಿಕಾರಿಗಳು | 1 | 1 |
| 6. | ಸಾರ್ವಜನಿಕ ಸಂಪರ್ಕಾಧಿಕಾರಿ | 1 | - |
| 7. | ಕಿರಿಯ ಸಂಶೋಧನಾಧಿಕಾರಿ | 1 | - |
| 8. | ಯೋಜನಾ ಸಹಾಯಕರು | 1 | 1 |
| 9. | ಕಲಾಕಾರರು | 1 | 1 |
| 10. | ಕಂಪ್ಯೂಟರ್ ಅನಾಲಿಸ್ಟ್ | 1 | 1 |
| | **ಒಟ್ಟು** | **11** | **7** |

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 97 ಯೋಯೋಕಾ 2005, ಬೆಂಗಳೂರು, ದಿನಾಂಕ: 23ನೇ ಮೇ 2005ಕ್ಕೆ ಅನುಬಂಧ-2**
**(ಇಡಿ 05 ಸ್ವೀಮರ (ಯೂನಿಕ್)2005, ದಿನಾಂಕ: 23ನೇ ಮೇ 2005**

ಧಾರವಾಡ ಮತ್ತು ಗುಲ್ಬರ್ಗಾ ಸಾರ್ವಜನಿಕ ಶಿಕ್ಷಣ ಆಯುಕ್ತಾಲಯಗಳಲ್ಲಿ ದಿನಾಂಕ: 1.4.2005 ರಿಂದ 31.3.2006 ರವರೆಗೆ ಮುಂದುವರಿಸಲ್ಪಟ್ಟ ಹುದ್ದೆಗಳ ವಿವರ

| ಕ್ರ. ಸಂ. | ವೃಂದ | ಧಾರವಾಡ ಆಯುಕ್ತಾಲಯ ವ್ಯಾಪ್ತಿಯ ಹುದ್ದೆಗಳು | ಗುಲ್ಬರ್ಗಾ ಆಯುಕ್ತಾಲಯ ವ್ಯಾಪ್ತಿಯ ಹುದ್ದೆಗಳು |
|---|---|---|---|
| 1. | ಹಿರಿಯ ಸಹಾಯಕ ನಿರ್ದೇಶಕರು | 2 | 0 |
| 2. | ಸಹಾಯಕ ನಿರ್ದೇಶಕರು | 2 | 1 |
| 3. | ಅಧೀಕ್ಷಕರು (ಲೆಕ್ಕಪತ್ರ ಅಧೀಕ್ಷಕರೂ ಸೇರಿದಂತೆ) ಮತ್ತು ಸಹಾಯಕ ಸಾಂಖ್ಯಿಕ ಅಧಿಕಾರಿ | 8 | 2 |
| 4. | ಪ್ರಥಮ ದರ್ಜೆ ಸಹಾಯಕರು (ಶೀಘ್ರ ಲಿಪಿಗಾರರು ಸೇರಿದಂತೆ) | 34 | 12 |
| 5. | ದ್ವಿತೀಯ ದರ್ಜೆ ಸಹಾಯಕರು:ಬೆರಳಚ್ಚುಗಾರರು:ಕಂಪ್ಯೂಟರ್ ಪ್ರೋಗ್ರಾಮರ್‌ಗಳು | 25 | 10 |
| 6. | ದಲಾಯತ್:ಗ್ರೂಪ್ ಡಿ | 10 | 8 |
| | **ಒಟ್ಟು** | **81** | **33** |

**ಗಮನಿಸಿ:**

ಸಮಾನಾಂತರ ಹುದ್ದೆಗಳಲ್ಲಿ ಅಗತ್ಯವಿರುವಷ್ಟು ಹುದ್ದೆಗಳನ್ನು ಲೆಕ್ಕಪತ್ರ ಅಧೀಕ್ಷಕರು:ಸಹಾಯಕ ಸಾಂಖ್ಯಿಕ ಅಧಿಕಾರಿಗಳು, ಶೀಘ್ರ ಲಿಪಿಗಾರರು ಹಾಗೂ ಕಂಪ್ಯೂಟರ್ ಪ್ರೋಗ್ರಾಮರ್ ಹುದ್ದೆಗಳಾಗಿ ಪರಿವರ್ತಿಸಲು ಅನುಮೋದನೆ ನೀಡಿದೆ.

**ಕೆ. ಶ್ರೀಕಂಠೇಶ್ವರ**

ಪಿ.ಆರ್. 776

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

**ಸುತ್ತೋಲೆ ಸಂಖ್ಯೆ: ಇಡಿ 122 ಪಿಬಿಎಸ್ 2004, ಬೆಂಗಳೂರು, ದಿನಾಂಕ: 31ನೇ ಮೇ 2005**

**ವಿಷಯ:** ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳು ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುವ ಬಗ್ಗೆ

ಮೇಲ್ಕಂಡ ವಿಷಯದ ಬಗ್ಗೆ ಪರಿಶೀಲಿಸಲಾಗಿ, ಅನೇಕ ಶಾಲೆಗಳಲ್ಲಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳ ನಿಗದಿತ ಅವಧಿ ಮುಗಿದ ನಂತರವು ಕಾರಣಾಂತರಗಳಿಂದ ಹೊಸ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳು ರಚನೆ ಆಗದಿರುವುದು, ಅಲ್ಲದೆ ಅಂಥ ಸಮಿತಿಗಳಿಗೆ ಅಧ್ಯಕ್ಷರ ಆಯ್ಕೆ ಆಗದಿರುವುದು ಸರಕಾರದ ಗಮನಕ್ಕೆ ಬಂದಿದೆ. ಇಂಥ ಪರಿಸ್ಥಿತಿಯಿಂದ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿ ರಚನೆಯ ಮೂಲ ಉದ್ದೇಶಕ್ಕೆ ನಿಶ್ಚಿತವಾಗಿಯೂ ಧಕ್ಕೆ ಉಂಟಾಗುತ್ತದೆ. ಅಲ್ಲದೆ ಅಂಥ ಶಾಲೆಗಳಲ್ಲಿ ಸರ್ವಶಿಕ್ಷ ಅಭಿಯಾನ ಕಾರ್ಯಕ್ರಮದ ಅನುಷ್ಠಾನಕ್ಕೆ ಅಡಚಣೆ ಉಂಟಾಗುತ್ತದೆ. ಈ ಅಂಶವನ್ನು ಗಮನದಲ್ಲಿ ಇಟ್ಟುಕೊಂಡು ಈ ಕೆಳಕಂಡ ಸೂಚನೆಗಳನ್ನು ನೀಡಲಾಗಿದೆ.

ಅ) ನಿಗದಿತ ಅವಧಿ ಪೂರ್ಣಗೊಂಡು ಹೊಸ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳು ರಚನೆ ಆಗದಿರುವ ಶಾಲೆಗಳಲ್ಲಿ ಶಾಲಾಭಿವೃದ್ಧಿ ಮತ್ತು ಮೇಲುಸ್ತುವಾರಿ ಸಮಿತಿಗಳ, ನಿಧಿ ನಿರ್ವಹಣೆಗೆ ಸಂಬಂಧಿಸಿದಂತೆ ಸಂಬಂಧಪಟ್ಟ ಶಾಲೆಗಳ ಮುಖ್ಯೋಪಾಧ್ಯಾಯರು ಹಾಗೂ ಅತ್ಯಂತ ಹಿರಿಯ ಶಿಕ್ಷಕರು ಸಹಭಾಗಿತ್ವ ಜವಾಬ್ದಾರಿ ನಿಭಾಯಿಸತಕ್ಕದ್ದು. ಆದರೆ ಅವರು ಸಮಿತಿಗೆ ಸಂಬಂಧಿಸಿದಂತೆ ಯಾವುದೇ ಅಂತಿಮ ನಿರ್ಧಾರ/ನಿರ್ಣಯ ಕೈಗೊಳ್ಳುವ ಪೂರ್ವದಲ್ಲಿ ಅಂಥಹ ಠರಾವಿನ ಬಗ್ಗೆ ಹಳೆಯ ಸಮಿತಿಯ ಪೋಷಕ ಸದಸ್ಯರುಗಳ ಪೂರ್ವಭಾವಿ ಅನುಮತಿ ಪಡೆಯುವುದು ಅತ್ಯಾವಶ್ಯಕವಾಗಿರುತ್ತದೆ.

ಆ) ತಮ್ಮ ಮಗು/ಮಕ್ಕಳು ಸದರಿ ಶಾಲೆಯ ವಿದ್ಯಾರ್ಥಿ ಆಗದಿದ್ದಾಗ್ಯೂ ಸಹ, ತಮ್ಮ ನಿಕಟ ಸಂಬಂಧಿಗಳ ಮಕ್ಕಳು, ಆ ಶಾಲೆಯಲ್ಲಿ ಕಲಿಯುತ್ತಿರುವವರು ಎಂಬ ಕಾರಣದಿಂದಾಗಿ ತಾವು ಪೋಷಕರು ಎಂದು ಅರ್ಥೈಸಿಕೊಂಡು, ಕೆಲ ಸಮಿತಿಗಳಲ್ಲಿ ಅಂಥವರು ಸದಸ್ಯರಾಗಿರುವುದು ಕಂಡುಬಂದಿದೆ, ಇದು ಸರಿಯಲ್ಲ. ಈ ಬಗ್ಗೆ ಸರಕಾರದ ಆದೇಶ ಸಂಖ್ಯೆ ಇಡಿ 1 ಪಿಬಿಎಸ್ 2001, ದಿನಾಂಕ: 28.4.2001ರಲ್ಲಿ ಪೋಷಕ ಪದದ ಅರ್ಥವನ್ನು ವಿಷದೀಕರಿಸಿದ್ದು ಅದು ಕೆಳಗಿನಂತಿದೆ. ಆದ್ದರಿಂದ ಈ ರೀತಿ ಯಾರಾದರೂ ಸಮಿತಿ ಸದಸ್ಯತ್ವ ಹೊಂದಿದ್ದಲ್ಲಿ, ಅಂಥವರ ಸದಸ್ಯತ್ವ ಅಸಿಂಧುವಿದ್ದು ಕೂಡಲೇ ರದ್ದುಗೊಳಿಸುವುದು.

**"ಪೋಷಕ ಸಭೆಯ ರಚನೆ:**

ಪ್ರತಿಯೊಂದು ಶಾಲೆಗೂ ಒಂದು ಪೋಷಕರ ಸಭೆ ಇರುತ್ತದೆ. ಮುಖ್ಯ ಗುರುಗಳ ಹತ್ತಿರ ನೋಂದಾಯಿತ ಪೋಷಕರ ಪಟ್ಟಿ ಇರುತ್ತದೆ. (ತಂದೆ ಮತ್ತು ತಾಯಿ ಇಬ್ಬರೂ, ತಂದೆ ತಾಯಿ ಇಲ್ಲದಿದ್ದಲ್ಲಿ ಪೋಷಕರು/ವಾರಸುದಾರರು)"

ಮೇಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

**ಬಿ.ಹೆಚ್. ಪಡಸಲಗಿ**

ಪಿ.ಆರ್. 777 ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ.

## LAW SECRETARIAT

**Sub:** Terms and conditions of appointment of Public prosecutor in Criminal cases against Ms.Jayalalitha and others.

**Read:** 1. Notification No.LAW 151 LCE 2003 dated 19.2.2005
2. Notification No.LAW 42 LCE 2005 dated 5.3.2005.

**Preamble:-**

In obedience to the Judgement dated 18th November 2003, passed by the Suprement Court of India, in Transfer Petition (Criminal) Nos. 77-78/2003 in the matter of K. Anbazhagan Vs. the Superintendent of Police and others and in exercise of the powers conferred by sub-section (8) of section 24 of the code of Criminal Procedure, 1973 (Central Act No.2 of 1974), as amended by the Code of Criminal Procedure (Amendment Act, 1978) and Rule 30 of the Karnataka Law Officers (Appointment and conditions of Service) Rules, 1977, Sri B.V. Acharya, Senior Advocate and former Advocate General of Karnataka has been appointed as Public Prosecutor vide Notification dated 19.2.2005 read at (1) above and Sri Sandesh J Chouta as Junior Advocate to assist Sri B.V. Acharya vide Notification dated 5.3.2005 read at (2) above pending issuance of terms and conditions of appointment and hence this order.

**Govt. Order No. LAW 42 LCE 2005, Bangalore, Dated: 23rd May 2005**

The terms and conditions of appointment of Sri B.V. Acharya, Sr. Advocate and Former Advocate General of Karnataka, as Public Prosecutor are as follows:-

**I. Fee:**

(i) He shall be elegible for a fee of Rs.3.00 Lakhs towards preparation and reading in each case.

(ii) He shall be elegible for a fee of Rs.50,000/- per day of effective appearance and 50% of this amount per day of non-effective appearance.

**II. Fee Payable for the Junior Advocate:**

(i) He shall be elegible for a fee of Rs.1.00 Lakh towards preparation and reading in each case.

(ii) He shall be elegible for a fee of Rs.15,000/- per day of effective appearance and 50% of this amount per day of non-effective appearance.

This order issues with the concurrence of the Finance Department vide its U.O.No.FD 317/Exp-7:05 dated 13.4.2005.

By Order and in the name of the Governor of Karnataka,

P.R. 779 **CHIKKAHANUMANTHAIAH**

Under Secretary to Government (Admn-I), Law Department.